

# ಹಣತೆ



ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

ಅಕ್ಟೋಬರ್ - 2019



# ಹಣತೆ

**ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ**

(ಖಾಸಗಿ ಪ್ರಸಾರಕ್ಕೆ ಮಾತ್ರ)

**ಸಂಚಿಕೆ - 53** **ಅಕ್ಟೋಬರ್ 2019**

## ಪರಿವಿಡಿ

# ಸಂಪಾದಕೀಯ

ಡಿಶೆಂಬರ್ 2018ರ 'ಹಣತೆ' ಹೊರಬಂದ ಮೇಲೆ ಮುಂದಿನ ಸಂಚಿಕೆ ಇದೀಗ ಬಿಡುಗಡೆಯಾಗುತ್ತಿದೆ. ನನ್ನ ಅನಾರೋಗ್ಯ, ಮೂರು ತಿಂಗಳ ಅಮೇರಿಕಾ ಪ್ರವಾಸ, ಸಂಪನ್ಮೂಲಗಳ ಕೊರತೆ ಹೀಗೆ ನಮ್ಮ ವೈಫಲ್ಯಕ್ಕೆ ಹಲವು ಕಾರಣಗಳನ್ನು ಕೊಡಬಹುದು. ಏನೇ ಇರಲಿ, ಈ ಸಂಚಿಕೆಯನ್ನು ನಾವು ಶಿವರಾಮ ಕಾರಂತರ 118ರ ಹುಟ್ಟು ಹಬ್ಬವನ್ನು ಆಚರಿಸುವಾಗ ಹೊರತರುತ್ತಿದ್ದೇವೆ.

ಬಹಳ ವರುಷಗಳಿಂದ ಹಣತೆಯ ಸಂಪಾದಕರಾಗಿದ್ದ ಹಿರಿಯ ವಿಮರ್ಶಕ ಶ್ರೀ ಬಿ.ವಿ. ಕೆದಿಲಾಯರು ಹಣತೆ ಸಂಪಾದಕತ್ವ ಹಾಗು ಶಿವರಾಮ ಕಾರಂತ ವೇದಿಕೆಯ ಅಧ್ಯಕ್ಷತೆಯಿಂದ ತನ್ನನ್ನು ಬಿಡುಗಡೆ ಮಾಡಬೇಕೆಂದು ಹೇಳುತ್ತಾ ಬಂದಿದ್ದರು. ತಮ್ಮ 83ನೇ ವರ್ಷದಲ್ಲೂ ದೂರದ ನೆಲಗದರನಹಳ್ಳಿಯ ಹೆಚ್.ಎಂ.ಟಿ. ಲೇಔಟ್‌ನಿಂದ ರವೀಂದ್ರನಾಥ ಠಾಗೋರ್ ನಗರಕ್ಕೆ ಬಂದು ನಮ್ಮ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಅಲ್ಲದೆ ಅವರು ಹಣತೆಗೆ ಮೌಲಿಕ ಲೇಖನಗಳನ್ನು ಬರೆದು, ಕಾರ್ಯಕ್ರಮಗಳಲ್ಲಿ ಉಪನ್ಯಾಸವನ್ನು ಮಾಡಿ, ನಮ್ಮ ಮೂಲ ಉದ್ದೇಶವಾದ ಗಂಭೀರ ಸಾಹಿತ್ಯದ ಅಧ್ಯಯನಕ್ಕೆ ಬಹಳ ಸಹಕಾರಿಯಾಗಿದ್ದರು. ಅವರು ಅಧ್ಯಕ್ಷ ಪದವಿ ಹಾಗು ಹಣತೆಯ ಸಂಪಾದಕತ್ವ ಎರಡಕ್ಕೂ ಕೊಟ್ಟ ರಾಜೀನಾಮೆಯನ್ನು ನಾವು ಭಾರವಾದ ಹೃದಯದಿಂದ ಸ್ವೀಕರಿಸಬೇಕಾಯಿತು. ಅಗಾಧವಾದ ನೆನಪಿನ ಶಕ್ತಿಯನ್ನು ಉಳ್ಳ ಶ್ರೀ ಕೆದಿಲಾಯರು ಗೋಪಾಲಕೃಷ್ಣ ಅಡಿಗರ ಕವನಗಳನ್ನು ಕಂಠಸ್ಥ ಮಾಡಿಕೊಂಡಿದ್ದರು. ರಾಮಾಯಣ ಭಾರತ ಮತ್ತಿತರ ಗ್ರಂಥಗಳನ್ನು ಆಳವಾಗಿ ಅಭ್ಯಸಿಸಿದ ಅವರು ನಮ್ಮ ಸಂಸ್ಕೃತಿಯ ಮುಖ್ಯ ವಕ್ತಾರರಲ್ಲಿ ಒಬ್ಬರಾಗಿದ್ದಾರೆ. ಭಾರತೀಯ ಸಿನಿಮಾಗಳ ಬಗ್ಗೆ ಕೂಡ ಅವರಿಗೆ ಪರಿಜ್ಞಾನವಿತ್ತು. ಅವರು ಸಹೃದಯ ವಿಮರ್ಶೆ ಹಾಗು ನಿರಂತರ ಓದುವಿಕೆಗಳನ್ನು ಮುಂದುವರಿಸುವುದರಲ್ಲಿ ಸಂಶಯವಿಲ್ಲ.

ಅಕ್ಟೋಬರ್ ತಿಂಗಳಲ್ಲಿ ಮಹಾತ್ಮಾ ಗಾಂಧಿ, ಲಾಲ್ ಬಹದ್ದೂರ್ ಶಾಸ್ತ್ರಿ ಹಾಗೂ ಶಿವರಾಮ ಕಾರಂತರು ಜನಿಸಿದರು. ಗಾಂಧೀಜಿಯವರ ಕುರಿತು ನಮ್ಮ ವೇದಿಕೆಯಲ್ಲಿ ಅರವಿಂದ ಚೊಕ್ಕಾಡಿಯವರು 15-09-2019ರಂದು ಮಾಡಿದ ಉಪನ್ಯಾಸದ ಸಾರವನ್ನು ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ಕಾರಂತರನ್ನು ಸಾಹಿತ್ಯಲೋಕ ಮರೆತಿಲ್ಲವೆಂಬುದು ಅವರ ಕುರಿತು ನಿರಂತರವಾಗಿ ಪ್ರಕಟವಾಗುತ್ತಿರುವ ಲೇಖನ, ವಿಮರ್ಶಾತ್ಮಕ ಗ್ರಂಥಗಳೇ ಸಾಕ್ಷಿ. ಆದರೆ ಕಾರಂತರು ಯಾವ ಮೌಲ್ಯಗಳಿಗಾಗಿ ತಮ್ಮ ಬಾಳಿನುದ್ದಕ್ಕೂ ಹೋರಾಡಿದರೋ ಆ ಮೌಲ್ಯಗಳು ಕಾಣೆಯಾಗಿವೆ. ಈ ಮಾತು ಬುದ್ಧ, ಬಸವಣ್ಣ, ಗಾಂಧೀಜಿ, ಲಾಲ್ ಬಹದ್ದೂರ್ ಶಾಸ್ತ್ರಿಗಳಿಗೂ ಅನ್ವಯಿಸುತ್ತದೆ. ಮಹಾತ್ಮರ ಜಯಂತಿಗಳನ್ನು ಆಚರಿಸಿ ಅವರ ತ್ಯಾಗ, ಬಲಿದಾನಗಳನ್ನು ನೆನಪಿಸಿಕೊಳ್ಳುವ ನಾವು, ನಮ್ಮ ಬದುಕಿನಲ್ಲಿ ಅವರ ತತ್ವಗಳನ್ನು ಆದರಿಸಬೇಡವೇ?

ಈ ಸಂಚಿಕೆಗೆ ತಮ್ಮ ಬರಹಗಳನ್ನು ಒದಗಿಸಿಕೊಟ್ಟ ಲೇಖಕರಿಗೂ, ಕರಡು ತಿದ್ದಿದ ಶ್ರೀ ರಮೇಶ ಗೋಟಾ ಅವರಿಗೂ ನಮ್ಮ ಕೃತಜ್ಞತೆಗಳು.

**– ಪ್ರಾ. ಚಂದ್ರಶೇಖರ ಚಡಗ**
ಸಂಪಾದಕ

## ವಿಶಿಷ್ಟ ಕಾದಂಬರಿ

'ಶಿವರಾಮ ಕಾರಂತರು ಯಾರೋ ಸಿದ್ಧಪಡಿಸಿ ಇರಿಸಿದ ತೀರ್ಮಾನಗಳಿಂದ ಬದುಕನ್ನು ಒಪ್ಪಿಕೊಳ್ಳುವವರೋ ಅಥವಾ ಯಾವುದೋ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾದವರೋ ಅಲ್ಲ. ಅವರೊಬ್ಬರ ವಿಚಾರವಾದಿ, ದಾರ್ಶನಿಕ. ಕಾರಂತರು ಬದುಕಿನ ಸಮಸ್ತ ಅನುಭವಗಳಿಗೆ ತಮ್ಮನ್ನು ಒಡ್ಡಿಕೊಂಡವರು. ಅಂತಹ ಸಂಘರ್ಷಗಳ ನಡುವೆಯೇ ಬೆಳೆದವರು. ಇಂತಹ ವಾಸ್ತವಿಕ ಅನುಭವವೇ ಕಾರಂತರ ಪಾಲಿಗೆ ಒಂದು ಪುಸ್ತಕ. ವಾಸ್ತವದ ನೆಲೆಯಲ್ಲಿ ಗಟ್ಟಿಯಾಗಿ ನಿಂತು ಅದರೊಳಗಿನ ಮತ್ತು ಅದರಾಚೆಯ ರಹಸ್ಯವನ್ನು ಆಳವಾಗಿ ಅನ್ವೇಷಿಸಿದವರು'. ಇತಿಹಾಸಕಾರ ರಾಮಚಂದ್ರ ಗುಹ ಅವರು ಕಾರಂತರನ್ನು ಸ್ವಾತಂತ್ರ್ಯೋತ್ತರ ಭಾರತದ ರವೀಂದ್ರನಾಥ್ ಠಾಗೋರ್ ಎಂದು ಕರೆದರು.

**– ಡಾ. ಜಿ.ಎಸ್. ಶಿವರುದ್ರಪ್ಪ**

# ಗಾಂಧಿ – ಪರಿಕಲ್ಪನೆ

**–ಅರವಿಂದ ಚೊಕ್ಕಾಡಿ**

ಗುಜರಾತ್‌ನ ವೈಶ್ಯ ಸಮುದಾಯದ ಬನಿಯಾ ಕುಟುಂಬದಲ್ಲಿ ಹುಟ್ಟಿದ ಮೋಹನ್ ದಾಸ್ ಗಾಂಧಿ ಡಾಕ್ಟರ್ ಆಗಬೇಕೆಂದು ಬಯಸಿದ್ದರು. ಆದರೆ ಡಾಕ್ಟರ್ ಆಗಲಿಲ್ಲ. ಅವರನ್ನು ಬ್ರಿಟನ್‌ಗೆ ಕಳಿಸಿದ ಅವರ ತಂದೆಯ ಮಿತ್ರ ಮಾವಜಿ ದವೆ ಮೋಹನ್‌ದಾಸ್ ಗಾಂಧಿ ಹಿಂದಿರುಗಿ ಬಂದು ಕಾಥೇವಾಡದ ದಿವಾನ ಆಗಬೇಕೆಂದು ಬಯಸಿದ್ದರು. ಆದರೆ ಗಾಂಧಿ ಗ್ರಾಮ ಪಂಚಾಯತ್ ಸದಸ್ಯನೂ ಆಗಲಿಲ್ಲ. ಆದರೆ ಚುನಾವಣೆಯಲ್ಲಿ ಒಂದು ಸೀಟನ್ನೂ ಗೆಲ್ಲಿಸಿಕೊಂಡು ಬರುವಷ್ಟು ಶಕ್ತಿ ಇಲ್ಲದ ಸಮುದಾಯದಿಂದ ಬಂದ ಗಾಂಧಿ, ಆಸ್ಟ್ರೇಲಿಯಾದಿಂದ ಕೆನಡಾದವರೆಗೆ, ರಷ್ಯಾದಿಂದ ಲ್ಯಾಟಿನ್ ಅಮೇರಿಕಾದವರೆಗೆ ತನ್ನ ಹೆಜ್ಜೆ ಗುರುತುಗಳನ್ನು ಇಟ್ಟಿರುವುದು ಆಧುನಿಕ ಭಾರತದ ವಿಸ್ಮಯ.

ಸಹಸ್ರ ಸಹಸ್ರಮಾನಗಳಿಗೊಮ್ಮೆ ಭಾರತ ಸೃಷ್ಟಿಸುವ ವಿಸ್ಮಯವಿದು. ಗಾಂಧಿ ರಾಮಕೃಷ್ಣರ ಪರಂಪರೆಯ ಇದುವರೆಗೆ ರೂಪುಗೊಂಡದ್ದರಲ್ಲಿ ಕೊನೆಯ ಕೊಂಡಿ. ಅಯೋಧ್ಯೆಯ ಚಕ್ರವರ್ತಿಯಾದ ರಾಮನಿಗೆ ಶಬರಿಯ ಎಂಜಲು ತಿನ್ನಲು ಅವನ ಸ್ಥಾನ ಅಡ್ಡಿಯಾಗಲಿಲ್ಲ. "ಹೆಸರಿರುವುದು ಕರೆಯಲಿಕ್ಕೆ, ನನ್ನನ್ನು ಕಳ್ಳನೆಂದು ಕರೆದರೂ ಅವನು ನನ್ನನ್ನೇ ಕರೆಯುತ್ತಿದ್ದಾನೆ ಎಂದೆನಿಸಿದರೆ ಹೋಗಿಯೇ ಹೋಗುತ್ತೇನೆ" ಎನ್ನಲು ಯೋಗೀಶ್ವರನಾದ ಕೃಷ್ಣನಿಗೆ ಅವನ ಜ್ಞಾನ ಅಡ್ಡಿಯಾಗಲಿಲ್ಲ. ಇದಾದರೂ ನಿಜವಾಗಿ ಏನಾಗಿದೆ ಎಂದು ನಮಗೆ ಗೊತ್ತಿಲ್ಲ; ವಾಲ್ಮೀಕಿ ವ್ಯಾಸರು ಹೇಳಿದ್ದು. ಆದರೆ ಮದುರೈಯಲ್ಲಿ ಬರಿ ಮೈಯ ಹುಡುಗನೊಬ್ಬನನ್ನು ಕಂಡ ಗಾಂಧಿ ಇನ್ನೆಂದೂ ತಾನು ಶರ್ಟು ಧರಿಸುವುದಿಲ್ಲವಂದು ನಿರ್ಧರಿಸಿ ಹಾಗೆಯೇ ಬಾಳಿದ್ದು ಗೊತ್ತಿದೆ. ಆದ್ದರಿಂದಲೇ ಅವರು ಭಾರತದ ಧಾರ್ಮಿಕ ಪರಂಪರೆಯ ಕೊನೆಯ ಕೊಂಡಿ ಎಂದು ನಾನು ಹೇಳಿದ್ದು. ಧರ್ಮವನ್ನು ನಾನು ಮತ ಎಂಬರ್ಥದಲ್ಲಿ ಬಳಸಿಲ್ಲ. "ನಾನೊಬ್ಬ ಸನಾತನ ಹಿಂದೂ" ಎಂದ ಗಾಂಧಿಯದ್ದು ವೈದಿಕ ಮತವಾಗಿರಲಿಲ್ಲ, ಧರ್ಮವೇ ಆಗಿತ್ತು. "ಧರ್ಮ; ಇತಿಧಾರಯೇತ್" ಧರಿಸಲು ಯೋಗ್ಯವಾದದ್ದೇ ಧರ್ಮ. "ನಾನೊಬ್ಬ ಹಿಂದು, ಆದ್ದರಿಂದಲೇ ಮುಸ್ಲಿಂ, ಕ್ರೈಸ್ತನೂ ಆಗಬಲ್ಲೆ" ಎನ್ನಲು ಗಾಂಧಿಗೆ ಸಾಧ್ಯವಾಗಿತ್ತು.

ಆಧುನಿಕ ಜಾತ್ಯತೀತತೆಯ ಬಗ್ಗೆ ಸುಮಾರು 100 ವರ್ಷಗಳಿಂದ ಭಾರತದಲ್ಲಿ

ಚರ್ಚೆ ನಡೆಯುತ್ತಿದೆ. ಬಹುತೇಕ ಜಾತ್ಯತೀತತೆ ಎಂದರೆ ಬ್ರಾಹ್ಮಣರಿಗೆ ಬಯ್ಯುವುದು ಎಂದರ್ಥ. ಆದರೆ ಬ್ರಾಹ್ಮಣರಿಗೆಂದೆಲ್ಲ; ಯಾವ ಜಾತಿಯವರೆಗೂ ಬಯ್ಯದೆ ಜಾತ್ಯತೀತನಾಗಿ ಬಾಳಿ ತೋರಿಸಿದವರು ಬಹುಶಃ ಗಾಂಧಿ ಒಬ್ಬರೇ. ಸಮುದ್ರ ದಾಟಿದಕ್ಕಾಗಿ ವೈಶ್ಯ ಸಮುದಾಯದಿಂದ ಮೊತ್ತ ಮೊದಲ ಬಾರಿಗೆ ಜಾತಿ ಬಹಿಷ್ಕೃತರಾದ ಗಾಂಧಿ ಜನಿವಾರ ಮುಂತಾದ ಜಾತಿ ಸಂಕೇತಗಳನ್ನು ತೆಗೆದರು. ಒಮ್ಮೆ ಜಾತಿ ಸಂಕೇತಗಳನ್ನು ತೆಗೆದ ಗಾಂಧಿ ಮತ್ತೆಂದೂ ಅವುಗಳನ್ನು ಧರಿಸಲಿಲ್ಲ.

ಗಾಂಧಿ ಅನೇಕ ತಪ್ಪುಗಳನ್ನು ಮಾಡಿದ್ದರೆಂದು ಅವರೇ ಬರೆದಿದ್ದಾರೆ. ಆದರೆ ತಪ್ಪುಗಳಿಂದ ಅವರು ಕಲಿಯುತ್ತಾ ಹೋದರು. ಏಕೆಂದರೆ ಗಾಂಧಿ ಬುದ್ಧಿವಂತನಲ್ಲ. ಕೇವಲ ಅರ್ಥ ಮಾಡಿಸುವುದಕ್ಕಾಗಿ ಇನ್ನೊಬ್ಬರನ್ನು ಉಲ್ಲೇಖಿಸುತ್ತೇನೆ. ಎರಡೂ ವ್ಯಕ್ತಿತ್ವಗಳು ಬೇರೆ ಬೇರೆ. ಹೋಲಿಸಲು ಆಗುವುದಿಲ್ಲ ಎಂಬ ಅರಿವಿದ್ದೇ ಹೇಳುತ್ತಿದ್ದೇನೆ. ಸುಭಾಷ್‌ಚಂದ್ರ ಬೋಸ್ ಭಾರತದ ಮಹಾನ್ ಬುದ್ಧಿವಂತ. ಅವರು ಕ್ಲೆವರ್ ಕೂಡ. ಪಕ್ಕಾ ಪ್ಲಾನ್ ಅನ್ನು ಸುಭಾಷ್‌ರಿಂದ ಕಲಿಯಬೇಕು. ಐಸಿಎಸ್ ಅನ್ನು ನಾಲ್ಕನೇ ರ್‍ಯಾಂಕ್‌ನಲ್ಲಿ ಉತ್ತೀರ್ಣರಾದ ಮಹಾ ಮೇಧಾವಿ ಅವರು. ಗಾಂಧಿ ಆ ರೀತಿಯ ಮೇಧಾವಿ ಅಲ್ಲ. ಅವರು ಬಾರ್ ಎಟ್ ಲಾವನ್ನು 3 ಕ್ಲಾಸ್‌ನಲ್ಲಿ ಉತ್ತೀರ್ಣರಾದದ್ದು. "ಐ ಸುಭಾಷ್ ಚಂದ್ರ ಬೋಸ್ ಫ್ರಮ್ ಈಸ್ಟ್ ಏಷ್ಯಾ" ಎಂದು ಈಗಲೂ ಲಭ್ಯವಿರುವ ಸುಭಾಷರ ಧ್ವನಿಯನ್ನು ಕೇಳಿದರೆ ಅವರ ಮೇಧಾ ಶಕ್ತಿಯ ಧೃಡತೆಯು ಅರ್ಥವಾಗುತ್ತದೆ. ಗಾಂಧಿಯದು ಬಹಳ ದುರ್ಬಲ ಧ್ವನಿ. ಬುದ್ಧಿವಂತನಲ್ಲದ ಗಾಂಧಿ ಮಹಾನ್ ಪ್ರತಿಭಾವಂತ. ಈ ಪ್ರತಿಭಾವಂತರು ರಿಸಲ್ಟ್‌ಗಿಂತ ಪ್ರಯೋಗದಲ್ಲಿ ಆಸಕ್ತರು. ಥಾಮಸ್ ಆಲ್ವಾ ಎಡಿಸನ್ ಅವರ 99 ಪ್ರಯೋಗಗಳು ವಿಫಲವಾದವು. ಆದರೆ 100ನೇ ಪ್ರಯೋಗದ ರಿಸಲ್ಟ್‌ಗಾಗಿ ವಿಶ್ವವೇ ಎಡಿಸನ್‌ಗೆ ಋಣಿಯಾಯಿತು. ಪ್ರತಿಭಾವಂತರು ವೈಫಲ್ಯಗಳನ್ನು ಸ್ವೀಕರಿಸಲು ತಯಾರಿರುತ್ತಾರೆ. ಗಾಂಧಿ ತನ್ನ ಆತ್ಮಚರಿತ್ರೆಗೆ "ಸತ್ಯದೊಂದಿಗಿನ ನನ್ನ ಪ್ರಯೋಗಗಳು" ಎಂದೇ ಹೆಸರಿಡುತ್ತಾರೆ. ಗಾಂಧಿಯ ಜೀವನವೇ ನಿರಂತರ ಪ್ರಯೋಗ. ವೈಪಲ್ಯಕ್ಕಾಗಿ ಅವರ ಆತ್ಮಸಾಕ್ಷಿ ಅವರನ್ನು ಕೊರೆಯುತ್ತದೆ. ಸುಭಾಷರ ವಿಚಾರದಲ್ಲಿ ತನ್ನದು ತಪ್ಪಾಯಿತೇನೋ ಎನ್ನುವ ಒಳಪ್ರಜ್ಞೆ ಸುಭಾಷರು ಪೂರ್ವ ಏಷ್ಯಾದಿಂದ ಕಣ್ಮರೆಯಾದಾಗ ಗಾಂಧಿಯ ಬಾಯಲ್ಲಿ "ಸುಭಾಷರು ಸತ್ತಿಲ್ಲ, ನಾನಿದನ್ನು ನಂಬಲಾರೆ. ಸುಭಾಷರು ನನ್ನ ಪುತ್ರ ಸಮಾನ, ಮಗನನ್ನು ಕಳೆದುಕೊಂಡಂತಹ ವೇದನೆಯಾಗಿದೆ ಎಂದು ಹೇಳುವಂತೆ ಮಾಡಿತು". ಅಂಬೇಡ್ಕರ್ ವಿಚಾರದಲ್ಲಿ ತಪ್ಪು ಮಾಡಿದನೇನೋ

ಎನ್ನುವ ಒಳಪ್ರಜ್ಞೆ ಪಂಡಿತ್ ಜವಾಹರಲಾಲ್ ನೆಹರೂರವರು ಸಂವಿಧಾನದ ಕರಡು ಸಮಿತಿಗೆ ಐವರ್ ಜನ್ನಿಂಗ್ಸ್‌ನನ್ನು ಸೂಚಿಸಿದಾಗ "ಈ ಕೆಲಸವನ್ನು ಮಾಡುವ ಮೇಧಾವಿ ನಮ್ಮಲ್ಲೇ ಇದ್ದಾರೆ, ಅಂಬೇಡ್ಕರ್ ಅವರ ಜ್ಞಾನದ ಬಗ್ಗೆ ನನಗೆ ವಿಶ್ವಾಸವಿದೆ" ಎಂದು ಗಾಂಧಿ ದೃಢವಾಗಿ ನಿಲ್ಲುವಂತೆ ಮಾಡಿತ್ತು. ಗಾಂಧಿ ಎಂಬ ಪರಿಕಲ್ಪನೆ ಆತ್ಮಸಾಕ್ಷಿಗೆ ನಿಷ್ಠೆ ಅಷ್ಟೆ. ಈ ಆತ್ಮಸಾಕ್ಷಿಯೇ ರಾಮ.

ನಾನಿದನ್ನು ಹೇಳಿದಕ್ಕೆ ನನ್ನ ಕೆಲವು ಜಾತ್ಯಾತೀತ ಮಿತ್ರರು "ಸಮಾಜವಾದಿ ಗಾಂಧಿಯ ಬಗ್ಗೆ ಹೇಳುವಾಗ ರಾಮನನ್ನು ತರುವುದೇಕೆ" ಎಂದು ತಕರಾರು ತೆಗೆದರು. ಇವರು ಒಮ್ಮೆ ಗಾಂಧಿಯನ್ನು ಬ್ರಾಹ್ಮಣಶಾಹಿ ಎನ್ನುತ್ತಾರೆ, ಇನ್ನೊಮ್ಮೆ ಸಮಾಜವಾದಿ ಎನ್ನುತ್ತಾರೆ. ನಿಜವಾಗಿ ಇವರುಗಳ ನಿಲುವೇನೆಂದು ನನಗೆ ಅರ್ಥವಾಗಿಲ್ಲ. ಅರ್ಥಮಾಡಿಕೊಳ್ಳುವ ಆಸಕ್ತಿಯೂ ಇಲ್ಲ. ಆದರೆ ರಾಮ ಇಲ್ಲದಿದ್ದರೆ ಗಾಂಧಿಯೇ ಇಲ್ಲ, ಅಂದಮೇಲೆ ಗಾಂಧಿಯ ಬಗ್ಗೆ ಹೇಳುವಾಗ ರಾಮನನ್ನು ಹೇಳದಿರುವುದು ಹೇಗೆ. ಗಾಂಧಿಯ ರಾಮನ ಪರಿಕಲ್ಪನೆ ನಮ್ಮಂತಹ ಸಾಮಾನ್ಯರ ಪರಿಕಲ್ಪನೆಗಿಂತ ಭಿನ್ನವಾದದ್ದು, ಇದನ್ನು ಒಪ್ಪುತ್ತೇನೆ. ರಾಮನೂ ಆತ್ಮಸಾಕ್ಷಿಗೆ ನಿಷ್ಠ. ರಾಜ್ಯವನ್ನು ಆಯ್ಕೆ ಮಾಡಿಕೊಳ್ಳಬೇಕೆಂದಿದ್ದಾಗ ಕುಟುಂಬವನ್ನು ಆಯ್ಕೆ ಮಾಡಿಕೊಂಡದ್ದು ತಪ್ಪಾಯಿತೆಂದು ಎರಡನೇ ಆಯ್ಕೆ ಬಂದಾಗ ಕುಟುಂಬವನ್ನು ಆಯ್ಕೆ ಮಾಡಿಕೊಳ್ಳದೆ ರಾಜ್ಯದ ಜನರ ಮಾತನ್ನು ಆರಿಸಿಕೊಂಡ. ಅದು ತಪ್ಪಾದಾಗ ಗಂಡನಾಗಿ ಹೆಂಡತಿಗೆ, ರಾಜನಾಗಿ ಪ್ರಜೆಗೆ ಆದೇಶಿಸಿ ನಿಲ್ಲಿಸಲು ಹೋಗದೆ ಭೂಗರ್ಭ ಸೇರುವ ಸೀತೆಯನ್ನು ಕಂಡು "ಹಾ ಸೀತೆ" ಎಂದು ಹಲಬುತ್ತಾನೆ. ಅಷ್ಟೆ ಆತ್ಮಸಾಕ್ಷಿ ಇಲ್ಲದವನಾದರೆ ಸೀತೆಗೆ ಭೂಗರ್ಭ ಸೇರಬಾರದೆಂದು ಆದೇಶಿಸುತ್ತಿರಲಿಲ್ಲವಾ. ಸೀತೆಗೆ ರಾಮನನ್ನು 'ಅನಾರ್ಯ' ಎಂದು ಬಯ್ಯುವಷ್ಟು ಸ್ವಾತಂತ್ರವಿತ್ತು.

ರಾಮನಿಗೆ ಗಾಂಧಿ ಸಮಾನ ಎಂದು ನನ್ನ ಮಾತಿನ ಅರ್ಥವಲ್ಲ. ಆದರೆ ಅಲ್ಲಿನ ಆತ್ಮಸಾಕ್ಷಿಯನ್ನೇ ಇಲ್ಲಿಯೂ ಕಾಣಬಹುದು. ಗಾಂಧಿಯು ನನ್ನ ಹಾಗೆ, ನಿಮ್ಮ ಹಾಗೆ ಹೆಂಡತಿಯ ಬಳಿ ಜಗಳವಾಡುತ್ತಾರೆ. ಕಸ್ತೂರಬಾರನ್ನು ಮನೆಯಿಂದ ಹೊರಗೆಯೂ ಹಾಕಿದರು ಮತ್ತೆ ಮನೆಯೊಳಗೆ ಕರೆದರು. ಕಸ್ತೂರಬಾ ಮೃತರಾದಾಗ ಅಜ್ಜಿ ಇಲ್ಲದ ಅಸಹಾಯಕ ಅಜ್ಜನ ಹಾಗೆ ಕಸ್ತೂರ್ಬಾ ಚಿತೆ ಪೂರ್ತಿ ಉರಿದು ಬೂದಿ ಆಗುವವರೆಗೆ ಆರು ಗಂಟೆಯ ಕಾಲ ಗಾಂಧಿ ನಿಂತಲ್ಲಿಂದ ಕದಲದೆ ದೊಣ್ಣೆ ಊರಿಕೊಂಡು ಉರಿಯುತ್ತಿರುವ ಚಿತೆಯನ್ನೇ ನೋಡುತ್ತಾ

ನಿಂತಿದ್ದರು. ವೈಸ್‌ರಾಯ್ ವೇವೆಲ್ ಕಳಿಸಿದ ಸಂತಾಪ ಪತ್ರಕ್ಕೆ ಉತ್ತರಿಸುತ್ತಾ "ಬಾ ಇಲ್ಲದ ಜಗತ್ತಿನಲ್ಲಿ ನಾನೇಕೆ ಬದುಕಿರಲಿ" ಎಂದು ಗಾಂಧಿ ಬರೆಯುತ್ತಾರೆ. ಕಸ್ತೂರಬಾ ಕೂಡ ಕಡಿಮೆಯವರೇನಲ್ಲ. ಸೊಸೆಗೆ ಕೊಡಲೆಂದು ತೆಗೆದಿರಿಸಿದ ಚಿನ್ನದ ಸರವನ್ನೂ ಬಿಡದೆ ಕಸ್ತೂರಬಾ ಕೈಯಿಂದ ಕಿತ್ತುಕೊಂಡು ದಲಿತೋದ್ಧಾರಕ್ಕೆ ಕೊಟ್ಟು ಬಿಡುತ್ತಾರೆ ಗಾಂಧಿ. ಆದರೆ ಕಸ್ತೂರಬಾ ಗೆಳತಿ "ಗಾಂಧಿಯಿಂದ ನಿನಗೆ ಕಿರುಕುಳ ಆಗಿರಬೇಕಲ್ಲವೇ" ಎಂದು ಕೇಳಿದಾಗ, "ಇಲ್ಲ, ಮುಂದಿನ ಜನ್ಮದಲ್ಲೂ ಅವರೇ ಪತಿಯಾಗಲಿ" ಎಂದು ಕಸ್ತೂರಬಾ ಉತ್ತರಿಸುತ್ತಾರೆ. ಈ ರೀತಿಯ ಮಾನವೀಯ ಮಿಡಿತಗಳು "ಗಾಂಧಿ ಎಂಬ ಪರಿಕಲ್ಪನೆ". ನಮ್ಮೊಳಗೂ ಅಂತಹ ಗಾಂಧಿಯೊಬ್ಬ ಇರುತ್ತಾರೆ. ನಾವು ಅದನ್ನು ಕಂಡುಕೊಳ್ಳಲು ಆಗದೆ ದಮನಿಸುತ್ತೇವೆ ಅಷ್ಟೇ.

ಜಗತ್ತಿನ ಆರ್ಥಿಕ ಚಿಂತನೆಗಳಲ್ಲಿ ನೈತಿಕತೆಗೆ ಮಹತ್ವವಿಲ್ಲ. ಅರ್ಥಶಾಸ್ತ್ರವೆಂದರೆ ಮೆಟೀರಿಯಲಿಸ್ಟಿಕ್ ಎಂದು ಲೆಕ್ಕ. ಆಧುನಿಕ ಅರ್ಥಶಾಸ್ತ್ರದ ಪಿತಾಮಹ ಎನಿಸಿದ ಆಡಂ ಸ್ಮಿತ್ 'ಥಿಯರಿ ಆಫ್ ಮಾರಲ್ ಸೆಂಟಿಮೆಂಟ್ಸ್'ನಲ್ಲಿ ನೈತಿಕತೆಯು ಕೂಡ ಆರ್ಥಿಕ ಸ್ವಾರ್ಥದ ಒಂದು ರೂಪ ಎಂದು ವ್ಯಾಖ್ಯಾನಿಸುತ್ತಾರೆ. ನೈತಿಕ ಅರ್ಥಶಾಸ್ತ್ರ ಭಾರತದಲ್ಲೇ ಹುಟ್ಟಿತು. ಸಂಗಮ್ ಕಾಲದ ತಮಿಳು ಕವಿ ತಿರುವಳ್ಳುವರ್ ಅವರ ತಿರುಕ್ಕುರುಳ್‌ನ ನಾಲ್ಕನೇ ಭಾಗವಾದ 'ಪೊರುತ್ತಾಳ್'ನಲ್ಲಿ ನೈತಿಕ ಅರ್ಥಶಾಸ್ತ್ರದ ಚಿಂತನೆಗಳಿವೆ. ತಿರುವಳ್ಳುವರ್ ಗತಿಸಿ 1900 ವರ್ಷಗಳ ನಂತರ ಬಂದ ಗಾಂಧಿ ಆಧುನಿಕ ನೈತಿಕ ಆರ್ಥಶಾಸ್ತ್ರವನ್ನು ಸಂಘಟಿಸುತ್ತಾರೆ. ಟಿವಿಯಲ್ಲಿ ಬರುವ ಜಾಹೀರಾತಿನಲ್ಲಿ ಜೆಲುಸಿಲ್ ಮಾತ್ರೆ ತೆಗೆದುಕೊಂಡಾದರೂ ಕುರುಕುರೆಯನ್ನು ತಾನೇ ತಿನ್ನುತ್ತಾನಲ್ಲದೆ, ಪಕ್ಕದವನಿಗೆ ಒಂದು ತುಂಡು ಕೊಡುವುದಿಲ್ಲ. ಕೊಳ್ಳುಬಾಕ ತನವನ್ನು ನಾನು ಸಂಸ್ಕೃತಿಯೆಂದು ಕರೆಯುವುದಿಲ್ಲ, ಇಂದಿನ ಕೊಳ್ಳುಬಾಕ ತನದ ಆರ್ಭಟದಲ್ಲಿ ನಮ್ಮನ್ನು ತಡೆದು ನಿಲ್ಲಿಸುವ, ನಮ್ಮನ್ನೂ ಈ ಪೃಥ್ವಿಯನ್ನೂ ಉಳಿಸುವ ಶಕ್ತಿ ಇರುವುದು ಗಾಂಧಿ ಎಂಬ ಪರಿಕಲ್ಪನೆಗೆ.

ಗಾಂಧಿ ಮೂಲಶಿಕ್ಷಣವನ್ನು ಪ್ರತಿಪಾದಿಸುತ್ತಾರೆ. ಒಂದನೇ ತರಗತಿಯಲ್ಲಿ ಆಲಿಸುವುದು, ಎರಡರಲ್ಲಿ ಓದಿಸುವುದು, ಮೂರರಲ್ಲಿ ಬರೆಸುವುದು, ನಾಲ್ಕರಲ್ಲಿ ಲೆಕ್ಕ ಕಲಿಸುವುದು, ಐದರಲ್ಲಿ ಕೈಕಸುಬು ಕಲಿಸುವುದು – ಹೀಗೆ ಈ ಶೈಲಿಯಲ್ಲಿ ಅದು ವಿಸ್ತರಿಸುತ್ತಾ ಹೋಗುತ್ತದೆ. ಒಟ್ಟಿನಲ್ಲಿ ಏಳನೇ ತರಗತಿ ಮುಗಿಯುವಾಗ ಬದುಕುವ ಶಕ್ತಿ ಬರಬೇಕು. ಸಂಸ್ಕಾರಯುತ ನಡವಳಿಗೆ ಬರಬೇಕು ಎಂಬ ಮಾದರಿಯಲ್ಲಿದೆ ಅದು. ಎಲ್ಲ ಜ್ಞಾನಗಳ ತಾಯಿಯಾದ ಶಿಕ್ಷಣವನ್ನು ಹೇಗೆ

ಇರಿಸಿಕೊಂಡಿದ್ದೇವೆ ಎಂದು ಯೋಚಿಸಿದರೆ ಗಾಂಧಿ ಒಂದು ಪರಿಕಲ್ಪನೆಯಾಗಿ ಯಾಕೆ ಅಗತ್ಯ ಎಂದು ಗೊತ್ತಾಗುತ್ತದೆ. ಅವರು ಬ್ರಹ್ಮಶ್ರೀ ನಾರಾಯಣ ಗುರುಗಳ ಆಶ್ರಮಕ್ಕೆ ಬಂದರು. ಅಲ್ಲಿ ಅಸ್ಪೃಶ್ಯರಿಂದ ಅಡುಗೆ ಮಾಡಿಸುತ್ತಿರುವುದನ್ನು ನೋಡಿ ಸಾಬರ್ಮತಿ ಆಶ್ರಮದಲ್ಲಿ ಅದನ್ನು ಜಾರಿಗೆ ತಂದರು.

"ನನಗೆ ಹೋರಾಟಕ್ಕೆ ಯಾವ ಸಿದ್ಧತೆಯೂ ಬೇಡ. ನಿಂತ ನೆಲದಲ್ಲೇ ಮಾಡಬಲ್ಲೆ" ಎಂದು ಗಾಂಧಿ 'ಯಂಗ್ ಇಂಡಿಯಾ'ದಲ್ಲಿ ಬರೆಯುತ್ತಾರೆ. ಈ ಸತ್ಯಾಗ್ರಹದ ಪರಿಕಲ್ಪನೆ ಎಷ್ಟು ಸರಳ ಎಂದರೆ ಮಕ್ಕಳು ಮಾಡುವ ಹೋರಾಟ ಅದು. ತಂದೆ-ತಾಯಿ ಎಷ್ಟು ಹೊಡೆದರೂ ಮಕ್ಕಳು ತಿರುಗಿಸಿ ಹೊಡೆಯುವುದಿಲ್ಲ. ಆದರೆ ಅವರಿಗೆ ಆಗಬೇಕಾದ್ದು ಆಗುವವರೆಗೆ ಬಿಡುವುದಿಲ್ಲ. ಆದರೆ ಇದನ್ನು ಜಾರಿಗೆ ತರುವುದು ಬಲು ಕಷ್ಟ. ಮಗುವಿನ ಪ್ರಾಮಾಣಿಕತೆ ಇರುವವನಿಂದ ಮಾತ್ರ ಇದು ಸಾಧ್ಯ. ಗಾಂಧಿಯಲ್ಲಿ ಆ ಪ್ರಾಮಾಣಿಕತೆ ಇತ್ತು. ಅದು ಗಾಂಧೀಜಿಯ ರೂಪಕಗಳನ್ನು ಸೃಷ್ಟಿಸಿದವು. ಉಪ್ಪಿನ ಸತ್ಯಾಗ್ರಹ ನೋಡಿ. ಸಾಂಬಾರಿನಲ್ಲಿ ಎಲ್ಲವೂ ಇದ್ದು ಉಪ್ಪು ಇಲ್ಲದಿದ್ದರೆ ರುಚಿ ಇಲ್ಲ. ಸ್ವಾತಂತ್ರ್ಯವೂ ಉಪ್ಪಿನ ಹಾಗೆ. ಸ್ವಾತಂತ್ರ್ಯವಿಲ್ಲದ ಬದುಕಿಗೆ ಸತ್ವವಿಲ್ಲ. ಸ್ವಾತಂತ್ರ್ಯ ಅತಿಯಾದರೆ ಸ್ವೇಚ್ಛಾಚಾರವಾಗಿ ಸಾಂಬಾರಿಗೆ ವಿಪರೀತ ಉಪ್ಪು ಹಾಕಿದರೆ ಏನಾಗುತ್ತದೆಯೋ ಹಾಗಾಗುತ್ತದೆ. ಉಪ್ಪು ಅಡುಗೆ ಮನೆಗೆ ಸೇರಿದ್ದು, ಅರ್ಥ ಮಹಿಳೆಯರ ಒಡತನದ್ದು. ಉಪ್ಪಿನ ಸತ್ಯಾಗ್ರಹದಲ್ಲಿ ಸಂಪ್ರದಾಯವಾದಿ ನಗರವೆನಿಸಿಕೊಂಡಿದ್ದ ಡೆಲ್ಲಿಯಿಂದಲೇ ಆರು ಸಾವಿರ ಮಹಿಳೆಯರು ಹೋರಾಟಕ್ಕಿಳಿದಿದ್ದರು. ಉಪ್ಪು ನಿಧಾನವಾಗಿ ಕರಗುತ್ತದೆ, ಈಗ ಉಪ್ಪಿನ ಸತ್ಯಾಗ್ರಹದ ಸ್ಪಿರಿಟ್ ಪೂರ್ತಿ ಕರಗಿದೆ. ಇದು ಗಾಂಧಿ ಸೃಷ್ಟಿಸಿದ ರೂಪಕಗಳಲ್ಲೊಂದು. ಎಲಿಜೆಬಿತ್ ರಾಣಿಗೆ ಮದುವೆ ಉಡುಗೊರೆಯಾಗಿ ತಾನೇ ನೇಯ್ದ ಟೇಬಲ್ ಕ್ಲಾತ್ ಅನ್ನು ಕಳಿಸುವ ಗಾಂಧಿ, ಅನ್ನ ತೆಗೆದವರ ಅನ್ನದ ತಟ್ಟೆಯಡಿಯ ವಸ್ತ್ರವಾಗಲು ಹಿಂಜರಿಯುವುದಿಲ್ಲ ಎಂಬ ರೂಪಕವನ್ನು ಸೃಷ್ಟಿಸುತ್ತಾರೆ. ಆಳವಾದ ನೈತಿಕ ಶಕ್ತಿಯಿಂದ ಮಾತ್ರ ಇಂತಹ ರೂಪಕ ಬರಲು ಸಾಧ್ಯ. ಅದರ ಫಲವೇನೆಂದರೆ ಹೆಜ್ಜೆ ಹೆಜ್ಜೆಗೂ ಗಾಂಧಿಗೆ ಬೈಯುತ್ತಾ ಇದ್ದ ವಿನ್ಸನ್ ಚರ್ಚಿಲ್, ಗಾಂಧಿ ಹತ್ಯೆಯಾದ ತಕ್ಷಣ ಗಾಂಧಿಯ ವಕೀಲನ ಹಾಗೆ ಮಾತನಾಡಲು ಶುರು ಮಾಡಿದರು. ಇವತ್ತು ಲಂಡನ್ ನಲ್ಲಿ ಗಾಂಧಿ ಮತ್ತು ಚರ್ಚಿಲ್ ಪ್ರತಿಮೆಗಳು ಅಕ್ಕಪಕ್ಕದಲ್ಲಿ ಇವೆ. ಒಬ್ಬ ಬ್ರಿಟಿಷ್ ಗಾಂಧಿಯ ಮೇಲೆ ಸಿನಿಮಾ ತೆಗೆದು ಜಗತ್ತಿನಾದ್ಯಂತ ಗಾಂಧಿಯನ್ನು ಪರಿಚಯಿಸಿದರು.

ಗಾಂಧಿ ಚಿಂತನೆಗಳು ಇಂಟರ್ ನ್ಯಾಷನಲ್ ಕೋರ್ಟ್ ಆಫ್ ಜಸ್ಟೀಸ್‌ನಲ್ಲಿ

ಗ್ರಂಥಾಲಯದ ರೆಫೆರೆನ್ಸ್ ಪುಸ್ತಕವಾಗಿ ಸೇರುತ್ತದೆ. ಯಾಕೆಂದರೆ ಗಾಂಧಿ ಬಳಿ ತಂತ್ರಗಳಿರಲಿಲ್ಲ. ಎಲ್ಲವೂ ತತ್ವವೇ. ಆ ತತ್ವಗಳನ್ನು ತಮ್ಮ ಮೇಲೆ ಪ್ರಯೋಗಿಸಿ ನಂತರ ಹೋರಾಟ ಮಾಡಿದವರವರು. ರಸೆಲ್, ಬರ್ನಾರ್ಡ್‌ಷಾರಂತಹ ಶಾಂತಿ ಪ್ರತಿಪಾದಕರು ಹಿಟ್ಲರ್‌ನ ಹುಟ್ಟಡಗಿಸಲು ಪ್ರಜಾಪ್ರಭುತ್ವ ರಾಷ್ಟ್ರಗಳು ಒಟ್ಟಾಗಬೇಕು ಎಂದು ಕರೆಕೊಟ್ಟರು. ಆದರೆ ಗಾಂಧಿ ತನ್ನ ತತ್ವವನ್ನು ಎಂದೂ ಬಿಟ್ಟುಕೊಡಲಿಲ್ಲ. ಏಕೆಂದರೆ ಗಾಂಧಿಯ ಚಿಂತನೆಗಳು ಮೆಟೀರಿಯಲಿಸ್ಟಿಕ್ ಚಿಂತನೆಗಳಿಂದ ಬಂದುದಾಗಿರಲಿಲ್ಲ. ಅದರ ಹಿಂದೆ ಸನಾತನ ಧರ್ಮದ ಬೇರುಗಳಿವೆ. ಗಾಂಧೀಜಿಯ ನಡವಳಿಕೆಗಳೆಲ್ಲವೂ ಋಗ್ವೇದವು ಹೇಳುವ ಋತದ ನಿಯಮದಂತೆ ಇದೆ. ಗಾಂಧಿಯ ವಿಶ್ವವ್ಯಾಪಕತ್ವವು ಈಷಾವಾಸ್ಯ ಉಪನಿಷತ್ತಿನ "ಈಷಾವಾಸ್ಯಮಿದಂ ಸರ್ವಂ ಯತ್ ಕಿಂಚಿತ್ ಜಗತ್ಯಾಂ ಜಗತ್" ಶ್ಲೋಕಕ್ಕೆ ಸಮಾನವಾಗಿದೆ. ಪ್ರಶ್ನಾತೀತವಾದ ಅಹಿಂಸಾ ಬದ್ಧತೆ ಜೈನಧರ್ಮದ ಪರಿಕಲ್ಪನೆಯ ಯಥಾರೂಪವೇ ಆಗಿದೆ. "ಹೇಡಿತನಕ್ಕಿಂಥ ಯುದ್ಧ ಮಾಡುವುದನ್ನು ನಾನು ಆರಿಸಿಕೊಳ್ಳುತ್ತೇನೆ" ಎನ್ನುವ ಒಂದು ಮಾತನ್ನು ಬಿಟ್ಟರೆ ಅವರು ಯುದ್ಧವನ್ನು ಆಯ್ಕೆಯಾಗಿ ಹೇಳಿದ್ದಿಲ್ಲ. ಗಾಂಧಿಯನ್ನು ಟೀಕಿಸುತ್ತಾ ಓಶೋ ರಜನೀಶ್ "ಯುದ್ಧವನ್ನು ಒಲ್ಲದ ನೀವು ಭಗವದ್ಗೀತೆಯನ್ನು ಯಾಕೆ ಮೆಚ್ಚಿಕೊಳ್ಳುತ್ತೀರಿ" ಎಂದು ಕೇಳಿದ್ದರು. ಆ ಕ್ಷಣದ ಮಟ್ಟಿಗೆ ಎರಡು ಸೈನ್ಯಗಳು ಎದುರು ಬದುರಾಗಿ ನಿಂತಾಗ ಯುದ್ಧ ನಡೆಯುವುದು ಋಗ್ವೇದದ ಋತದ ನಿಯಮ ಎಂಬುದನ್ನು ರಜನೀಶ್ ಮರೆತಿದ್ದರು ಅಷ್ಟೆ. ಇತಿಹಾಸದ ಒಂದು ವಿಡಂಬನೆಯೂ ಸೃಷ್ಟಿಯಾಯಿತು. ಜೀವನದ ಶೇಕಡ 90ರಷ್ಟು ಕಾಲ ಯುರೋಪಿಯನ್ ಮೆಟೀರಿಯಲಿಸ್ಟಿಕ್ ಸೆಕ್ಯುಲರ್ ಆಗಿದ್ದ ಮೊಹಮ್ಮದಾಲಿ ಜಿನ್ನಾ ಒಂದು ಮತೀಯ ರಾಷ್ಟ್ರದ ನಿರ್ಮಾಪಕ ಮತ್ತು ಅದರ ರಾಷ್ಟ್ರಪಿತ. ಜೀವನಪೂರ್ತಿ ತನ್ನ ಪ್ರತಿಯೊಂದು ಆಲೋಚನೆಯನ್ನೂ ಧರ್ಮದಿಂದಲೇ ಆಯ್ದುಕೊಂಡ ಗಾಂಧಿ ಒಂದು ಸೆಕ್ಯುಲರ್ ರಾಷ್ಟ್ರದ ನಿರ್ಮಾಪಕ ಮತ್ತು ಅದರ ರಾಷ್ಟ್ರಪಿತ. ಡೇವಿಡ್ ಫ್ರಾವ್ಲೆ ಎಂಬ ವಿದ್ವಾಂಸ ಹಿಂದೂ ಧರ್ಮವನ್ನು ಒಂದು ಪೂರ್ವ ಧರ್ಮ ಎಂದು ಕರೆಯುತ್ತಾರೆ. ಸನಾತನ ಧರ್ಮದ ಅತ್ಯುತ್ಕೃಷ್ಟ ಉತ್ಪನ್ನವೇ ಗಾಂಧಿ. ಅದಕ್ಕೆ ಹಮೀದ್ ದಲವಾಯಿ ಎಂಬ ಲೇಖಕ "ಹಿಂದುಗಳಿಗೆ ನಾವು ಮರೆತುಬಿಟ್ಟಿದ್ದೇವಲ್ಲ ಎನ್ನಲು ಒಬ್ಬ ಗಾಂಧಿಯಾದರೂ ಇದ್ದಾರೆ, ನಮಗೆ ಮರೆತಿದ್ದೇವೆ ಎಂದು ಹೇಳಲಿಕ್ಕೂ ಯಾರೂ ಇಲ್ಲ" ಎನ್ನುತ್ತಾರೆ.

ಇಂತಹ ಗಾಂಧಿಗೆ ಸತ್ಯಾಗ್ರಹದ ರುಚಿ ತೋರಿಸಿದವರೊಬ್ಬರಿದ್ದಾರೆ. ಶುಕ್ಲ

ಎಂದು ಅವರ ಹೆಸರು. ಗಾಂಧಿ ಕಾಶಿ ವಿದ್ಯಾಪೀಠಕ್ಕೆ ಭಾಷಣಕ್ಕೆ ಹೋದವರು. ಚಂಪಾರಣ್‌ನಿಂದ ಬಂದ ಶುಕ್ಲ ಎನ್ನುವ ರೈತ ಚಂಪಾರಣ್‌ಗೆ ಬರುವಂತೆ ಗಾಂಧಿಯನ್ನು ಕರೆಯುತ್ತಾರೆ. ಗಾಂಧಿ ಒಪ್ಪುವುದಿಲ್ಲ. ಆದರೆ ಶುಕ್ಲ ಗಾಂಧಿ ಒಪ್ಪುವವರೆಗೆ ಬಿಡುವುದಿಲ್ಲ. ಸತ್ಯಾಗ್ರಹದ ರುಚಿಯನ್ನು ಗಾಂಧಿಗೆ ತೋರಿಸಿದ ಮನುಷ್ಯ.

ಗಾಂಧಿಯ ಕೊಡುಗೆಗಳಲ್ಲಿ ಮಹತ್ತರವಾದದ್ದು ಸ್ವರಾಜ್ಯದ ಪರಿಕಲ್ಪನೆ. ಸ್ವರಾಜ್ಯದ ಪರಿಕಲ್ಪನೆಗೆ ಆಧಾರ ಸರ್ವೋದಯದ ಪರಿಕಲ್ಪನೆ. ಸರ್ವೋದಯವು ಗರಿಷ್ಟ ಜನರ ಗರಿಷ್ಟ ಕಲ್ಯಾಣವೆಂಬ ಸುಖೀ ರಾಜ್ಯದ ಯುರೋಪಿಯನ್ ಕಲ್ಪನೆಗಿಂತ ಭಿನ್ನ. ಎಲ್ಲಾ ರೀತಿಯ ಸಮೃದ್ಧಿಯ ಪರಿಕಲ್ಪನೆ ಇದು. ಅಂತರಂಗದ ಸಂತೋಷವು ಇಲ್ಲಿ ಮುಖ್ಯವಾಗುತ್ತದೆ, ಅದನ್ನು ಸಾಧಿಸಬೇಕಾದರೆ ನಮ್ಮನ್ನು ನಾವೇ ಆಳಿಕೊಳ್ಳುವ ಸ್ವರಾಜ್ಯ ಸ್ಥಾಪನೆಯಾಗಬೇಕು, ನಮ್ಮನ್ನು ನಾವೇ ಆಳಿಕೊಳ್ಳುವುದೆಂದರೇನು, ಅಲ್ಲಿ ಪೋಲೀಸರ, ಅಥವಾ ಶಿಕ್ಷೆಯ ಭಯದಿಂದ ಕಾನೂನು ಪಾಲನೆ ಇರುವುದಿಲ್ಲ. ಸ್ವಅರಿವಿಂದ ವ್ಯಕ್ತಿ ಶಿಸ್ತನ್ನು ಪಾಲಿಸುತ್ತಾನೆ. ಗಾಂಧಿ ರಾಜಕೀಯ ಕಾನೂನುಗಳ ಬಗ್ಗೆ ಬಹಳ ತಲೆಕೆಡಿಸಿಕೊಂಡವರಲ್ಲ. ಬ್ರಿಟಿಷ್ ಜಡ್ಜ್‌ಗೆ "ದಾಸ್ಯದ ವಿರುದ್ಧ ಹೋರಾಡುವುದು ಕಾನೂನು ಪ್ರಕಾರ ರಾಜದ್ರೋಹವಾದರೆ, ಮೂರು ವರ್ಷವಲ್ಲ, ಆರು ವರ್ಷ ನನ್ನನ್ನು ಜೈಲಿಗೆ ಹಾಕಿ, ಏಕೆಂದರೆ ಜೈಲಿನಿಂದ ಹೊರಬಂದೊಡನೆ ನಾನು ರಾಜದ್ರೋಹವನ್ನೇ ಮಾಡಲಿದ್ದೇನೆ" ಎನ್ನುತ್ತಾರೆ. ಗಾಂಧಿ ಧನಾತ್ಮಕ ಅರಾಜಕತಾವಾದಿ. ಜನರು ರಾಜಕೀಯ ನಿಯಂತ್ರಣದಿಂದ ಮುಕ್ತರಾಗಬೇಕು ಎಂದು ಭಾವಿಸಿದವರು. ಚರ್ಚಿಲ್ ದೇಶ ವಿಭಜನೆಯಾದಾಗ ಇನ್ನು ಭಾರತದಲ್ಲಿ ರಕ್ತಪಾತವೇ ನಡೆಯಲಿದೆ ಎಂದಾಗ ಗಾಂಧಿ ಭಾರತದಲ್ಲಿ ರಕ್ತಪಾತವಾದರೆ ಇಂಗ್ಲೆಂಡ್ ಹೇಗೆ ನೆಮ್ಮದಿಯಿಂದಿರುತ್ತದೆ ಎಂದು ಕೇಳುತ್ತಾರೆ. ಭಾರತ ಇಂಗ್ಲೆಂಡ್ ಬೇರೆ ಬೇರೆ ರಾಷ್ಟ್ರಗಳು. ಆದರೆ ವಿಶ್ವ ಸಮಾಜವಾಗಿ ಜನರು ಒಂದೇ ಸಮಾಜಕ್ಕೆ ಸೇರಿರುವರು. ಒಂದೆಡೆ ಆದ ಕೆಡುಕಿನ ಪರಿಣಾಮ ಮತ್ತೊಂದು ಕಡೆಯೂ ಆಗುತ್ತದೆ. ಪ್ರಭುತ್ವ ಇಲ್ಲಿ ಮಹತ್ವದಲ್ಲ. ಗಾಂಧೀಜಿಯವರ ಸ್ವರಾಜ್ಯದ ಪರಿಕಲ್ಪನೆ ಬಹುತೇಕ ಪುರಾತನ ಭಾರತದ ಚಿಕ್ಕ ಚಿಕ್ಕ ಗಣರಾಜ್ಯಗಳ ಆಡಳಿತವನ್ನು ಹೋಲುತ್ತದೆ, ಅದನ್ನು ಸಾಧಿಸುವ ಕೆಲಸವನ್ನು ಗಾಂಧಿಯ ಉಳಿದೆಲ್ಲ ಪರಿಕಲ್ಪನೆಗಳು ಮಾಡುತ್ತವೆ.

ನಾವೀಗ ಸ್ಮರಣ ಕಾರ್ಯಕ್ರಮಗಳನ್ನು ಜಯಂತಿ ಎಂದು ಆಚರಿಸುತ್ತೇವೆ. ಆದರೆ ಜಯಂತಿಯ ನಿಜವಾದ ಪರಿಕಲ್ಪನೆ ಅದಲ್ಲ. ಜಯವನ್ನು ಅಂತಿಸಿದವನು ಯಾವನೊ ಅವನು ಜಯಂತ. ಯಾರು ಸೋಲು ಮತ್ತು ಗೆಲುವು ಎರಡನ್ನೂ

ಮೀರಿ ನಿಲ್ಲಬಲ್ಲರೊ ಅವರ ನೆನಪಿನಲ್ಲಿ ಆಚರಿಸುವುದು ಜಯಂತಿ. "ಸಾಯಲ್ಪಡಲು ನನಗೆ ನೂರು ಕಾರಣಗಳಿವೆ. ಕೊಲ್ಲಲು ಒಂದು ಕಾರಣವೂ ಇಲ್ಲ" ಎಂದು ಯಾವಾಗ ಗಾಂಧಿ ಹೇಳಿದರೊ ಆಗ ಅವರಿಗೆ ಜಯವನ್ನು ಮೀರಿ ನಿಲ್ಲುವ ಶಕ್ತಿ ಬಂದಾಯಿತು. ಜಯಂತಿಯ ಗೌರವಕ್ಕೆ ಅರ್ಹರಾದವರು ಗಾಂಧೀಜಿಯೇ.

ಇದುವರೆಗೆ ನಾನು ಮಾತನಾಡಿದ್ದು ಸ್ವಾತಂತ್ರ್ಯ ಹೋರಾಟಗಾರ ಗಾಂಧಿಯ ಬಗ್ಗೆಯಲ್ಲ. ಸ್ವಾತಂತ್ರ್ಯ ಗಾಂಧಿ ಇಲ್ಲದಿದ್ದರೂ ಬರುತ್ತಿತ್ತು. ಆದರೆ ಸ್ವರಾಜ್ಯದ ಆಕಾಂಕ್ಷೆಯೊಂದನ್ನು ಕೊಡಲು ಗಾಂಧಿಂಗೆ ಮಾತ್ರವೇ ಸಾಧ್ಯವಿದ್ದದ್ದು. ಸ್ವಾತಂತ್ರ್ಯದ ವಿಷಯದಲ್ಲಿ ಗಾಂಧಿ "ಭಾರತ ಕೈತಪ್ಪಿದ ಹತ್ತು ವರ್ಷಗಳಲ್ಲಿ ನಿಮ್ಮೆಲ್ಲ ವಸಾಹತುಗಳೂ ಕೈತಪ್ಪಲಿವೆ" ಎಂದು ಬ್ರಿಟೀಷರಿಗೆ ಹೇಳಿದ್ದರು. ಅದು ಹಾಗೇ ಆಯಿತು. ಆದರೆ "ಅಹಿಂಸೆ ಮತ್ತು ಪ್ರೇಮವನ್ನು ಭಾರತ ಧರ್ಮವಾಗಿ ಸ್ವೀಕರಿಸಿದರೆ ಸ್ವರಾಜ್ಯ ಸ್ವರ್ಗದಿಂದ ಇಳಿದು ಬರುತ್ತದೆ" ಎಂದ ಗಾಂಧಿ, "ಅದನ್ನು ನನ್ನ ಜೀವಿತಾವಧಿಯಲ್ಲಿ ಕಾಣಸು ಸಾಧ್ಯವಿಲ್ಲ ಎಂಬ ಯಾತನಾಮಯ ಅರಿವು ನನಗಿದೆ" ಎಂದೂ ಹೇಳಿದ್ದರು. ಮಹಾಭಾರತದಲ್ಲಿ ವ್ಯಾಸ ಮಹರ್ಷಿ ಧೃತರಾಷ್ಟ್ರ ತಾನೂ ಸನ್ಯಾಸ ತೆಗೆದುಕೊಳ್ಳುತ್ತೇನೆ ಎಂದಾಗ "ಸನ್ಯಾಸವೆಂದರೆ ಪಲಾಯನವಾದವಲ್ಲ, ಸಾಧ್ಯವಿದ್ದರೆ ಗೃಹಸ್ಥಾಶ್ರಮದ ಸನ್ಯಾಸಿಯಾಗು" ಎಂದು ವ್ಯಾಸರು ಹೇಳುತ್ತಾರೆ. ಗೃಹಸ್ಥಾಶ್ರಮದ ಸನ್ಯಾಸವೆಂದರೇನು? ಎಂದು ಧೃತರಾಷ್ಟ್ರನ ಪ್ರಶ್ನೆ. "ಯಾವುದು ನಿನ್ನದಲ್ಲವೊ ಅದು ನಿನ್ನದಲ್ಲ. ಅಷ್ಟೆ, ಗೃಹಸ್ಥಾಶ್ರಮದ ಸನ್ಯಾಸ" ಎಂದು ವ್ಯಾಸರು ಉತ್ತರಿಸುತ್ತಾರೆ. ಗಾಂಧಿ ಗೃಹಸ್ಥಾಶ್ರಮದ ಸನ್ಯಾಸಿ. ಆ ಶಕ್ತಿ ಇರುವ ಒಬ್ಬ ಋಷಿಗೆ ಮಾತ್ರ ತನ್ನನ್ನು ತಾನೇ ಆಳಿಕೊಳ್ಳುವ ಸ್ವರಾಜ್ಯದ ಕನಸನ್ನು ಕಾಣಲು ಸಾಧ್ಯ. ಇದುವರೆಗೆ ನಾನಾಡಿದ ಮಾತುಗಳು ಭಾರತದ ಋಷಿ ಪರಂಪರೆಯ ಕೊನೆಯ ಕೊಂಡಿಯಾದ ಗಾಂಧಿಯ ಬಗ್ಗೆ ಹೊರತು ಸ್ವಾತಂತ್ರ್ಯ ಹೋರಾಟಗಾರನ ಬಗ್ಗೆಯಲ್ಲ.

ಗಾಂಧಿ ಹೇಗೆ ಎಲ್ಲವನ್ನೂ ಮೀರಿ ನಿಲ್ಲುತ್ತಾರೆ ನೋಡಿ, ಪ್ರತಿಯೊಬ್ಬ ಮಹಾವ್ಯಕ್ತಿಗಳನ್ನೂ ಆಯಾ ಜಾತಿಗಳವರು ಕಟ್ಟಿಹಾಕಿ ನರಳಿಸುತ್ತಿರುವಾಗಲೂ ಗಾಂಧಿಯನ್ನು ಯಾರಿಗೂ ಕಟ್ಟಿ ಹಾಕಲು ಸಾಧ್ಯವಾಗಿಲ್ಲ. ಯಾರು ಹೇಗೆ ಬೇಕಾದರೂ ಗಾಂಧಿಯ ಬಗ್ಗೆ ಮಾತನಾಡಬಹುದು. ಯಾವ ಜಾತಿ, ಧರ್ಮ, ಮತ, ಪಂಥದವರಿಗೂ ಕಟ್ಟಿ ಹಾಕಲು ಸಾಧ್ಯವಾಗದಿರುವ ಗಾಂಧಿಗಿಂತ ಎತ್ತರದಲ್ಲಿ ಮತ್ತೊಬ್ಬ ಜಾತ್ಯಾತೀತ ನಾಯಕ ಇರಲು ಸಾಧ್ಯವಿಲ್ಲ. ಗಾಂಧಿಯ ಪರವಾಗಿ

ಯಾವುದೇ ಲಾಜಿ ಇಲ್ಲ. ಯಾವುದೇ ರಾಜಕೀಯ ಪಕ್ಷ ಗಾಂಧಿ ತನ್ನವನು ಎನ್ನುವ ತಾಕತ್ತನ್ನು ಹೊಂದಿಲ್ಲ. ಆದರೆ ಕಳೆದ ಒಂದು ಶತಮಾನದಲ್ಲಿ ಗಾಂಧಿಯ ಹೆಸರೆತ್ತದೆ ಒಂದು ದಿನವೂ ದೇಶ ಇರಲಿಲ್ಲ. you can refuse Gandhi; but you can't neglet Gandhi. ಹಿಂದೂ ಹಿಂದೂ ಎಂದರೆ "ನಾನೂ ಹಿಂದೂ" ಎಂದು ಗಾಂಧಿ ಅಡ್ಡ ನಿಲ್ಲುತ್ತಾರೆ. ಹಿಂದೂ–ಮುಸ್ಲಿಮ್ ಸಾಮರಸ್ಯ ಎಂದು ಹೊರಟರೆ, "ನನ್ನನ್ನು ದಾಟಿ ಮುಂದೆ ಹೋಗು" ಎಂದು ಅಲ್ಲಿಯೂ ಗಾಂಧಿ ಅಡ್ಡ ನಿಲ್ಲುತ್ತಾರೆ. ಶಾಂತಿಪಾಲನೆ ಎಂದು ಹೊರಟರೆ ಅಲ್ಲಿಯೂ, "ನನ್ನನ್ನು ದಾಟದೆ ನೀನು ಮುಂದೆ ಹೋಗಲಾರೆ" ಎಂದು ಗಾಂಧಿ ಅಡ್ಡ ನಿಲ್ಲುತ್ತಾರೆ. ಈ ವ್ಯಕ್ತಿತ್ವ ಗಾಂಧಿಯ ಹೊರತು ಬೇರೆ ಯಾರಿಗೂ ಇಲ್ಲ. ಇದೇ ಗಾಂಧಿ ಎಂಬ ಪರಿಕಲ್ಪನೆ.

ಈ ಪರಿಕಲ್ಪನೆ ಇಂದಿನ ಮಹತ್ವ ಬಹುಮುಖ್ಯವಾಗಿ ಮಾನವ ದ್ವೇಷವನ್ನು ನಿವಾರಿಸುವುದರಲ್ಲಿದೆ. ಒಂದು ಬ್ರಾಹ್ಮಣ ದ್ವೇಷ, ಇನ್ನೊಂದು ಮುಸ್ಲಿಂ ದ್ವೇಷ. ಬ್ರಾಹ್ಮಣ ದ್ವೇಷದವರು ಕನ್ನಡ ಚಿಂತನಾ ಕ್ಷೇತ್ರವನ್ನೇ ಬರಗೆಡಿಸಿ ಇತಿಹಾಸದಲ್ಲಿ ವರ್ತಮಾನವನ್ನು ಕೊಳೆಯಿಸುತ್ತಿದ್ದಾರೆ. ಇದನ್ನು ಏನೂ ಮಾಡಲು ಸಾಧ್ಯವಿಲ್ಲ. ಎದುರಿಸಬೇಕಷ್ಟೆ. ಏಕೆಂದರೆ ತಿಳಿದವರು ಸತ್ಯ ಗೊತ್ತಿದ್ದೂ ಪ್ರಜ್ಞಾಪೂರ್ವಕವಾಗಿ ಇದನ್ನು ಮಾಡುತ್ತಿದ್ದಾರೆ. ನಿದ್ದೆ ಬಂದವನನ್ನು ಎಬ್ಬಿಸಬಹುದೆ ಹೊರತು ನಿದ್ದೆ ಬಂದಂತೆ ನಟಿಸುವವರನ್ನು ಎಬ್ಬಿಸಲು ಸಾಧ್ಯವಿಲ್ಲ. ಮುಸ್ಲಿಂ ದ್ವೇಷ ಕಾರುವವರು ಸನಾತನ ಹಿಂದೂ ಧರ್ಮದ ವೈಚಾರಿಕ ಅರಿವನ್ನು ಬೆಳೆಯಿಸಿಕೊಂಡಾಗ ಸರಿ ಹೋಗಬಲ್ಲರು. ಇಲ್ಲಿರುವುದು ಅರಿವಿನ ಕೊರತೆ. ಸರಿಯಾದ ಸರಿವಿನಿಂದ ಈ ಸಮಸ್ಯೆ ಪರಿಹಾರವಾಗಬಲ್ಲುದು. ನಮಗೆ ಸಾಧ್ಯವಾದಷ್ಟು ಈ ಮಾನವ ದ್ವೇಷವನ್ನು ನಿವಾರಿಸಲು ಪ್ರಯತ್ನಿಸೋಣ.

**ಹನಿಗವನ**

ಅವಳು ಬಿಜೆಪಿ
ಅವನು ಕಾಂಗ್ರೆಸ್
ಪ್ರೀತಿಸಿದರು ಪರಸ್ಪರ
ಮದುವೆಯಾಗಿ
ಮಗುವೂ ಆಯಿತು
ಹೆಸರು ಕಮಲಾಕರ

– ಡುಂಡಿರಾಜ್

# ಸಾಹಿತ್ಯ – ಸಂತೋಷಕ್ಕೆ ರಾಜಮಾರ್ಗ

**– ಶಶಾಂಕ ಪರಾಶರ**

ಸಂತೋಷವನ್ನು ಯಾರು ಬಯಸುವುದಿಲ್ಲ? ಖುಷಿ, ನೆಮ್ಮದಿ, ಆನಂದಗಳು ಎಲ್ಲ ಮನುಷ್ಯರೂ, ಎಲ್ಲ ಕಾಲದಲ್ಲೂ ಬಯಸುವ ಸ್ಥಿತಿಗಳು. ಇವನ್ನು ಪಡೆಯುವ ಮಾರ್ಗ ಬೇರೆಯಿದ್ದರೂ, ತಲುಪುವ ಗಮ್ಯ ಮಾತ್ರ ಒಂದೇ. ಹೀಗೆ ಖುಷಿ ನೀಡುವ ಸಾಧನಗಳು ಹಲವು ಇವೆ. ಕೆಲವರಿಗೆ ಸಂಗೀತ ಪ್ರಪಂಚವನ್ನೇ ಮರೆಸಿದರೆ, ಹಲವರುನ್ನು ನೃತ್ಯವು ಸೂರೆಗೊಳ್ಳಬಹುದು. ಮತ್ತೊಬ್ಬರಿಗೆ ಸಿನೆಮಾ ಬಹು ಮೆಚ್ಚಿಗೆಯಾದರೆ ಇನ್ನೊಬ್ಬರಿಗೆ ಛಾಯಾಚಿತ್ರಣ ಅತ್ಯಂತ ಪ್ರಿಯವಾಗಬಹುದು. ಈ ಹತ್ತು ಹಲವು ಸಂತೋಷದಾಯಕ ಸಾಧನಗಳಲ್ಲಿ ಸಾಹಿತ್ಯವು ಕೆಲವರು ಬಯಸುವ ಮಾರ್ಗ. ಸಂಗೀತ, ನೃತ್ಯ ಮುಂತಾದ ಕಲಾಪ್ರಕಾರಗಳಂತೆ ಜನಸಾಮಾನ್ಯರಿಗೆ ಸಾಹಿತ್ಯವು ರುಚಿಸದು ಎಂಬೊಂದು ಅಭಿಪ್ರಾಯವು ಇದೆ. ಆದರೆ ಅದು ಎಷ್ಟು ಸಾಧೂ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಊಟ ಮಾಡಲು ರಚ್ಚೆ ಹಿಡಿಯುವ ಮಗುವು ಮೈಮರೆತು, ತಾನೇ ಬಾಯಿ ತೆರೆಯುವಂತೆ ಮಾಡುವುದು ತಾಯಿ ಹೇಳುವ ಕತೆ. ಆ ಕತೆಯಾದರೂ ಮಗುವು ತನ್ನ ಸುತ್ತಮುತ್ತಲು ನಿತ್ಯವೂ ನೋಡುವ ನಾಯಿ–ಬೆಕ್ಕು–ಕಾಗೆ–ಗುಬ್ಬಿಯದು. ಈ ಕತೆಯು ಸಾಹಿತ್ಯವಲ್ಲದೆ ಮತ್ತಿನ್ನೇನು? ಆದರೆ ಬುದ್ಧಿ ಬಲಿತ ಹಿರಿಯರನ್ನು ಸಮ್ಮೋಹನಗೊಳಿಸಲು ಈ ಕತೆಯು ಅಶಕ್ತವಾಗುತ್ತದೆ. ಅಲ್ಲಿ ಸಾಹಿತ್ಯವು ಸಾಕಷ್ಟು ವ್ಯಂಜಕ ಸಾಮಗ್ರಿಗಳನ್ನು ಕೂಡಿಸಿಕೊಂಡು ರಸಭೂಯಿಷ್ಠವಾಗಿರಬೇಕು (ಅದರ ಲಕ್ಷಣವನ್ನು ಮುಂದೆ ನೋಡೋಣ). ಹಾಗಾದರೆ ಸಾಹಿತ್ಯವೆನ್ನುವುದು ಅಕ್ಷರ/ಪದಗಳ ನಿಯಮಿತ ರೂಪದ ಮುಖೇನ ಅದನ್ನು ಬರೆಯುವವನು ಓದುಗನನ್ನು ತಲುಪುವ ಪ್ರಕ್ರಿಯೆ ಎಂದು ಹೇಳಬಹುದಷ್ಟೇ. ಆದರೆ ಇದು ಶುಷ್ಕ ಅರ್ಥ ನಿರೂಪಣೆಯಷ್ಟೇ ಆಗುತ್ತದೆ. ಹಾಗಾದರೆ ಸಾಹಿತ್ಯವೆಂದರೇನು/ ಈ ಪ್ರಶ್ನೆಗೆ ಡಿ.ವಿ. ಗುಂಡಪ್ಪನವರು ಹೀಗೆ ಉತ್ತರಿಸುತ್ತಾರೆ. "ಕಣ್ಣಿನ ಮೂಲಕ ಹೃದಯವನ್ನು ಸ್ಪರ್ಶಿಸುವ ಮಾನುಷ ಕೃತಿಗೆ ಶಿಲ್ಪ, ವರ್ಣಚಿತ್ರ ನರ್ತನ – ಇವು ಉದಾಹರಣೆಗಳು. ಸಂಗೀತ–ಗಮಕ ಇವು ಕಿವಿಯ ಮೂಲಕ ಹೃದಯವನ್ನು ಸ್ಪರ್ಶ ಮಾಡುವ ಮಾನುಷ ಕೃತಿಗೆ ಉದಾಹರಣೆಗಳು. ಘ್ರಾಣೇನಿಂದ್ರಿಯ ರಸನೇಂದ್ರಿಯಗಳ ಮೂಲಕ ಹೃದಯವನ್ನು ಸ್ಪರ್ಶಮಾಡುವ ಕಲೆಗೆ ಪಾಕಶಾಸ್ತ್ರ, ಪರಿಮಳ ಶಾಸ್ತ್ರಗಳು

ಉದಾಹರಣೆ. ಏಕಕಾಲದಲ್ಲಿ ಮೂರೂ ನಾಲ್ಕು ಐದು ಇಂದ್ರಿಯಗಳನ್ನು ವಶಪಡಿಸಿಕೊಂಡು ತದ್ವಾರಾ ಹೃದಯವನ್ನು ಸ್ಪರ್ಶಿಸುವ ಮಾನುಷ ಕೃತಿಯೇ ಸಾಹಿತ್ಯ. ಈ ಕಾರಣದಿಂದಲೇ ಪದ್ಯ, ಗದ್ಯ ರೂಪದ ಕಾವ್ಯಕ್ಕೆ ಸಾಹಿತ್ಯವೆಂಬ ಹೆಸರು ಸಾರ್ಥಕವಾಗುತ್ತದೆ. ಆದರಲ್ಲಿ ಸಮಸ್ತ ಇಂದ್ರಿಯಗಳ ಸಹಿತತ್ವವಿರುತ್ತದೆ; ಸಮಸ್ತ ಅನುಭವಗಳೂ ಒಟ್ಟುಗೂಡಿರುತ್ತವೆ.

ಸಾಹಿತ್ಯವೆನ್ನುವುದು ಇಂದ್ರಿಯಗಳನ್ನು ಆವರಿಸಿ, ಮನಸ್ಸಿನಲ್ಲಿ ಹೊಸ ಭಾವ ಮತ್ತ ರಂಜನೆಯನ್ನು ಮೂಡಿಸುವುದು. ಇದನ್ನು ಮುಖ್ಯವಾಗಿ ಪದ್ಯ ಮತ್ತು ಗದ್ಯವೆಂದು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ಕಾವ್ಯವೆನ್ನುವುದು ಶಬ್ದಕ್ಕೆ ಸಾಂಕೇತಿಕ ಅರ್ಥವನ್ನಿಟ್ಟು ಕಾವ್ಯಸತ್ವದ ಮೂಲಕ ಭ್ರಾಮಕ ಲೋಕವನ್ನು ಸೃಜಿಸಿ ಸಹೃದಯನ ಹೃದಯವನ್ನು ಸೂರೆಗೊಳ್ಳುವುದಾದರೆ ಗದ್ಯವು ಇದನ್ನೇ ಬೇರೊಂದು ರೀತಿಯಲ್ಲಿ ಸಾಧಿಸುತ್ತದೆ. ಗದ್ಯಸಾಹಿತ್ಯದ ಬಗ್ಗೆ ಮ.ತಿ.ನ. ಅವರು ಹೇಳುತ್ತಾರೆ. "ಗದ್ಯದ ಬರವಣಿಗೆಗೆ ಅತ್ಯಂತ ಸಮೀಚೀನವಾದ ಚಿತ್ತಸ್ಥಿತಿ ಯಾವುದೆಂದರೆ, ಭಾವಜಾಗ್ರತವಾಗಿರುವ ಹೃದಯದ ಎದುರಿನಲ್ಲಿ ಶಿಕ್ಷಿತವೂ ಸಂಸ್ಕೃತವೂ ಆದ ಬುದ್ಧಿ ಚಿತ್ರವಿಚಿತ್ರವೂ ವ್ಯಾಪಕವೂ ಆದ ಹುರುಪು ನಡಿಗೆಯ ಬೆಡಗುಗಳನ್ನು ತೋರಲು ಸನ್ನದ್ಧತೆಯಲ್ಲಿರುವ ಸ್ಥಿತಿ" (ಗದ್ಯಕಲೆ ಲೇಖನ) ಹಾಗೆಯೇ ಮುಂದುವರೆಸಿ, ಅವರು ಹೇಳುತ್ತಾರೆ. "ಎಲ್ಲಿಯೂ ಪದ್ಯತನವನ್ನು ಮುಟ್ಟದಿರುವುದು, ಹಾಗೆ ಮುಟ್ಟದೆಯೇ ಕಾವ್ಯಗುಣವನ್ನು ಪ್ರದರ್ಶಿಸುವುದು ಈ ಕಲೆಯ ರಹಸ್ಯ.

ಕುವೆಂಪು ಅವರ ಈ ಪದ್ಯವನ್ನು ಈಗ ಗಮನಿಸಬಹುದು

ಶಿವಮಂದಿರಸಮ ವನಸುಂದರ ಸುಮಶೃಂಗಾರದ ಗಿರಿಶೃಂಗಕೆ ಬಾ!
ಬಾ ಫಾಲ್ಗುಣ ರವಿ ದರ್ಶನಕೆ!
ಕುಂಕುಮ ಧೂಳಿಯ ದಿಕ್ತಟವೇದಿಯೊಳೋಕುಳಿಯಲಿ ಮಿಂದೇಳುವನು
ಕೋಟಿವಿಹಂಗಮ ಮಂಗಲರವ ರಸನೈವೇದ್ಯಕೆ ಮುದ ತಾಳುವನು
ಚಿನ್ನದ ಚೆಂಡನೆ ಮೂಡುವನು; ಹೊನ್ನನೆ ಹೊಯ್ನೀರ್ ನೀಡುವನು
ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆಯ ಹರಿಯಿಸಿ ರವಿ ದಯಮಾಡುವನು.

ಇಲ್ಲಿ, ಕವಿಯು ಪ್ರಾರಂಭದಲ್ಲಿಯೇ, ವಾಚಕನಿಗೆ ತಾನು ಎಲ್ಲಿದ್ದಾನೆ, ಏನನ್ನು ವೀಕ್ಷಿಸುತ್ತಿದ್ದಾನೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಅಂದರೆ ಕಾವ್ಯದ ದೇಶಕಾಲಗಳು

ಸ್ಪಷ್ಟವಾಗುತ್ತದೆ. ವಾಚಕನು ಈಗ ಸೂರ್ಯೋದಯದ ವೀಕ್ಷಣೆಗೆ ತಯಾರಾಗಿದ್ದಾನೆ ಸೂರ್ಯೋದಯವಾದಾಗ, ಕಡುಗೆಂಪಾದ ಆಕಾಶದಿಂದೇಳುವ ಸೂರ್ಯನು ಕುಂಕುಮದಲ್ಲಿ ಮುಳುಗಿ ಎದ್ದಂತಿದ್ದಾನೆ. ವಾಚಕನ ಮನಸ್ಸು ಈಗ ಈ ದೃಶ್ಯವನ್ನು ಸೃಷ್ಟಿಸಿದೆ. ಅದರ ನಂತರ ಅಲ್ಲಿಗೆ ಹಕಿಗಳ ಪ್ರವೇಶವಾಗಿ, ಅವುಗಳ ಸದ್ದು ವಾಚಕನಿಗೆ ತಿಳಿಯುತ್ತದೆ. ಆಗ ಸೂರ್ಯ ಹೇಗಿದ್ದಾನೆ? ಚಿನ್ನದ ಚೆಂಡಿನಂತೆ ಗುಂಡಗೆ ಮಿನುಗುತ್ತಿದ್ದಾನೆ. ಈಗ ಪದ್ಯ ವಾಚಕನ ಮನಸ್ಸು ಸೂರ್ಯೋದಯವನ್ನು ಸೃಷ್ಟಿಸಿಕೊಂಡು ಸೂರ್ಯ ಮೂಡಿದಾಗ, ತಂಪಾದ ಗಾಳಿಯನ್ನು ಬೇಧಿಸಿ ಎಳೆಬಿಸಿಲು ನೀಡುವ ಹಿತ, ಅದೇ ಸಮಯಕ್ಕೆ ದಿನವೂ ಚಪ್ಪರಿಸುವ ಬಿಸಿ ಕಾಫಿ ಎಲ್ಲವನ್ನೂ ಕಲ್ಪಿಸಿಕೊಂಡಿರುತ್ತದೆ. ತನ್ಮೂಲಕ ಪದ್ಯವು ವಾಚಕನ ಸಕಲೇಂದ್ರಿಯಗಳನ್ನೂ ಆವರಿಸಿಕೊಂಡು ಭ್ರಾಮಕ ಲೋಕಕ್ಕೆ ಒಯ್ದಿರುತ್ತದೆ.

ಓದು ಒಬ್ಬ ಕವಿ ಮಾಡುವ ಕೆಲಸ. ಆದರೆ ಶ್ರೇಷ್ಠ ಕವಿ, ಈ ನಿತ್ಯಜೀವನದ ಘಟನೆಗಳನ್ನೇ ಚಿತ್ರಿಸುತ್ತಾ ಇಂದ್ರಿಯ ಗಮ್ಯ ಅನುಭವವನ್ನು ದೈವೀ ಅನುಭವವಾಗಿ ಬದಲಿಸುತ್ತಾನೆ. ಕುವೆಂಪುರವರ ಈ ಪದ್ಯವನ್ನು ಮತ್ತೆ ನೋಡೋಣ. ಸೂರ್ಯೋದಯವಾಗುತ್ತಿರುವ ಗಿರಿಯು ಶಿವಮಂದಿರದಷ್ಟು ದೈವಿಕವಾದದ್ದು. ಕುಂಕುಮದಲ್ಲಿ ಮಿಂದೇಳುವ ಈ ಸೂರ್ಯನಿಗೆ ಅದು ಅಭಿಷೇಕವಾದರೆ, ಹಕ್ಕಿಗಳ ಚಿಲಿಪಿಲಿ ಮಂಗಳವಾದ್ಯದ ಗಾನವಾಗುತ್ತದೆ. ಪ್ರಾಕೃತಿಕ ಸೌಂದರ್ಯದ ವಿವರಣೆಯ ಪದ್ಯದ ಅರ್ಥ ಸ್ಫುಟವಾದಂತೆಲ್ಲಾ ಅದು ಒಂದು ಸುಂದರ ಪೂಜಾ ವಿಧಾನವನ್ನು ವರ್ಣಿಸುವುದು ಕಾಣುತ್ತದೆ (ಇದರ ಶಾಸ್ತ್ರೀಯ ಪಾರಿಭಾಷಿಕ ಶಬ್ದಗಳು ಇಲ್ಲಿ ಅನಗತ್ಯ).

ಇದು ಕಾವ್ಯವು ಕೆಲಸ ಮಾಡುವ ರೀತಿ. ಹೀಗೆ, ಕಾವ್ಯವನ್ನು ಕವಿ ಎಂಬ ಪ್ರತಿಭೆಯು ಸೃಜಿಸಿದ ನಂತರ ಅದರ ಅಂತರಾಳವನ್ನು ಅರಿತು ಸವಿಯಲು ಅದಕ್ಕೊಬ್ಬ ಓದುಗ ಬೇಡವೇ? ಆತನಿಗೆ ನಮ್ಮ ಪರಂಪರೆ ಕೊಟ್ಟ ಹೆಸರು ಸಹೃದಯ. ಕವಿಯ ಹೃದಯಕ್ಕೆ ಸಮಾನವಾದ ಹೃದಯವುಳ್ಳವನೇ ಸಹೃದಯ. ಕಾವ್ಯವು ಸಾರ್ಥಕವಾಗುವುದು ರಸಿಕನ ಹೃದಯದಲ್ಲಿ ಮತ್ತೆ ನೆಲೆಗೊಂಡಾಗ. ಆದ ಕಾರಣವೇ, ಕವಿ–ಸಹೃದಯರಿಬ್ಬರೂ ಒಂದೇ ಸಾರಸ್ವತ ತತ್ತ್ವದ ಅಂಗಗಳೆಂದೂ, ಇಬ್ಬರೂ ಒಂದುಗೂಡಿಯೇ ಕಾವ್ಯವಾಗುವುದೆಂದೂ ಅರ್ಥ ಬರುವಂತೆ ಅಭಿವನಗುಪ್ತನು "ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಾಂ ವಿಜಯತೇ" (ಭಾರತೀಯ ಕಾವ್ಯ ಮೀಮಾಂಸೆ, ತೀ.ನಂ.ಶ್ರೀ).

ಹೀಗೆ ಕವಿಯ ರಚನೆಯು ಸಹೃದಯದಲ್ಲಿ ನೆಲೆಗೊಂಡು ಸಾರ್ಥಕ್ಯವನ್ನು ಪಡೆದರೆ, ಸಹೃದಯನು ಭಾವಪರವಶತೆಯಿಂದ ಧನ್ಯತೆಯನ್ನು ಅನುಭವಿಸುತ್ತಾನೆ. ಇದರಿಂದ ಆಗುವ ಮುಖ್ಯ ಲಾಭವು ಆತ್ಮತೃಪ್ತಿ ಮತ್ತು ಹೃದಯ ವೈಶಾಲ್ಯ ಹೊರತು ಮತ್ತೊಂದಲ್ಲ. ಇದನ್ನು ಕಗ್ಗವು ಹೀಗೆ ತಿಳಿಸುತ್ತದೆ.

ಸಂಗೀತ ಕಲೆಯೊಂದು, ಸಾಹಿತ್ಯ ಕಲೆಯೊಂದು
ಅಂಗಾಂಗ ಭಾವ ರೂಪಣದ ಕಲೆಯೊಂದು
ಸಂಗಳಿಸಲೀ ಕಲೆಗಳನುನಯವು ಚರ್ಯೆಯಲಿ
ಮಂಗಳೋನ್ನತ ಕಲೆಯೊ – ಮಂಕುತಿಮ್ಮ

## ವಿಶಿಷ್ಟ ಕಾದಂಬರಿ

'ಶಿವರಾಮ ಕಾರಂತರು ಯಾರೋ ಸಿದ್ಧಪಡಿಸಿ ಇರಿಸಿದ ತೀರ್ಮಾನಗಳಿಂದ ಬದುಕನ್ನು ಒಪ್ಪಿಕೊಳ್ಳುವವರೋ ಅಥವಾ ಯಾವುದೋ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾದವರೋ ಅಲ್ಲ. ಅವರೊಬ್ಬರ ವಿಚಾರವಾದಿ, ದಾರ್ಶನಿಕ. ಕಾರಂತರು ಬದುಕಿನ ಸಮಸ್ತ ಅನುಭವಗಳಿಗೆ ತಮ್ಮನ್ನು ಒಡ್ಡಿಕೊಂಡವರು. ಅಂತಹ ಸಂಘರ್ಷಗಳ ನಡುವೆಯೇ ಬೆಳೆದವರು. ಇಂತಹ ವಾಸ್ತವಿಕ ಅನುಭವವೇ ಕಾರಂತರ ಪಾಲಿಗೆ ಒಂದು ಪುಸ್ತಕ. ವಾಸ್ತವದ ನೆಲೆಯಲ್ಲಿ ಗಟ್ಟಿಯಾಗಿ ನಿಂತು ಅದರೊಳಗಿನ ಮತ್ತು ಅದರಾಚೆಯ ರಹಸ್ಯವನ್ನು ಆಳವಾಗಿ ಅನ್ವೇಷಿಸಿದವರು'. ಇತಿಹಾಸಕಾರ ರಾಮಚಂದ್ರ ಗುಹ ಅವರು ಕಾರಂತರನ್ನು ಸ್ವಾತಂತ್ರ್ಯೋತ್ತರ ಭಾರತದ ರವೀಂದ್ರನಾಥ್ ಠಾಗೋರ್ ಎಂದು ಕರೆದರು.

**– ಡಾ. ಜಿ.ಎಸ್. ಶಿವರುದ್ರಪ್ಪ**

# ಕಾರಂತರ ಕಾದಂಬರಿಗಳ ರಚನಾ ವಿನ್ಯಾಸ

– ಡಾ. ಬಿ. ಜನಾರ್ದನ ಭಟ್

ಶಿವರಾಮ ಕಾರಂತರು ತಮ್ಮ ಕತೆ, ಕಾದಂಬರಿಗಳಲ್ಲಿ ಸಮಾಜವನ್ನು ವಿಮರ್ಶಿಸಿ, ಬದಲಾಗಬೇಕಾದ ಒಂದು ಆದರ್ಶ ಸಮಾಜದ ಕನಸನ್ನು ಕಂಡವರು ಎನ್ನುವುದನ್ನು ವಿಮರ್ಶಕರು ಗುರುತಿಸಿದ್ದಾರೆ. ಅವರು ಮೂವತ್ತರ ದಶಕದಲ್ಲಿ ತಮ್ಮ ಮೂರು ಸಣ್ಣಕಥಾ ಸಂಕಲನವನ್ನು ಪ್ರಕಟಿಸಿದಾಗ ಅವುಗಳ ಮುನ್ನುಡಿಯಲ್ಲಿ ತಾನು ಯಾವ ಉದ್ದೇಶಕ್ಕಾಗಿ ಈ ಕತೆಗಳನ್ನು ಬರೆದೆನೆಂದು ಸ್ಪಷ್ಟಪಡಿಸಿದ್ದಾರೆ. ಹಾಗೆಯೇ ಕಾದಂಬರಿಗಳಲ್ಲೂ ಸಮಾಜದ ಯಾವ ಅಂಶಗಳ ಕುರಿತಾಗಿ, ಕುಂದುಕೊರತೆಗಳ, ವೈಚಿತ್ರ್ಯಗಳ ಕುರಿತಾಗಿ ಬರೆದಿರುವೆನೆಂದು ಸ್ಪಷ್ಟಪಡಿಸಿದ್ದಾರೆ.

ಶಿವರಾಮ ಕಾರಂತರು ತಮ್ಮ ಬರವಣಿಗೆಯ ಒಂದು ಕಾಲ ಘಟ್ಟದಲ್ಲಿ – 1930 ರ ದಶಕದಲ್ಲಿ – ಸಣ್ಣ ಕತೆಯನ್ನು ತಮ್ಮ ಪ್ರಧಾನ ಅಭಿವ್ಯಕ್ತಿಯ ಮಾಧ್ಯಮವಾಗಿ ಸ್ವೀಕರಿಸಿದ್ದರು. ಆ ದಶಕದಲ್ಲಿ ಒಂದರ ಹಿಂದೆ ಒಂದರಂತೆ ಮೂರು ಕಥಾ ಸಂಕಲನಗಳನ್ನು (ಹಸಿವು – 1931, ಹಾವು – 1932, ತೆರೆಯ ಮರೆಯಲ್ಲಿ – 1936) ಅವರು ಪ್ರಕಟಿಸಿದರು. ಇದೇ ಅವಧಿಯ ಕಾರಂತರ ಕಾದಂಬರಿಗಳ ಪ್ರಾರಂಭದ ಘಟ್ಟ ನೇರವಾದ ಸಮಾಜ ವಿಮರ್ಶೆಯ ಕಾದಂಬರಿಗಳ ಘಟ್ಟ ಎನ್ನುವುದನ್ನು ನೆನಪಿಸಿಕೊಳ್ಳಬೇಕು. 1940 ಕ್ಕಿಂತ ಮುಂಚೆ ಅವರು ಬರೆದ ಕಾದಂಬರಿಗಳಾದ – 'ಕನ್ಯಾಬಲಿ', 'ಚೋಮನ ದುಡಿ', 'ಸರಸಮ್ಮನ ಸಮಾಧಿ' ಈ ಬಗೆಯವು.

ಕಾರಂತರು ಕತೆಗಳನ್ನು ಬರೆಯಲಾರಂಭಿಸಿದ ಕಾಲದಲ್ಲಿ ಸುಧಾರಣಾವಾದದ ಪ್ರಾಬಲ್ಯವಿತ್ತು. ಆಗ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುವ ಕತೆಗಳನ್ನು ಜನ ಗಂಭೀರವಾಗಿ ಪರಿಗಣಿಸುತ್ತಿದ್ದರು. ಜನಜೀವನದ ಕುಂದುಕೊರತೆಗಳನ್ನು, ಕೆಡುಕುತನಗಳನ್ನು ತೋರಿಸಿಕೊಡಲು, ಜನರನ್ನು ತಿದ್ದಲು ಸಣ್ಣ ಕತೆಗಳ ಪ್ರಕಾರ ಉಪಯುಕ್ತವೆಂದು ಆ ಕಾಲದ ಉದಾರ ಮಾನವತಾವಾದಿಗಳಾದ ಸಾಹಿತಿಗಳು ತಿಳಿದುಕೊಂಡಿದ್ದರು. ಕಾರಂತರು ಕೂಡಾ ಹಾಗೆ ಈ ಮಾಧ್ಯಮವನ್ನು ಬಳಸಿಕೊಂಡದ್ದು ಸಹಜವಾಗಿದೆ.

ಸಣ್ಣಕತೆಗಳಲ್ಲಿ ಪ್ರಾರಂಭಿಸಿದ ಸಮಾಜ ವಿಮರ್ಶೆಯನ್ನು ಕಾರಂತರು ತಮ್ಮ ಕಾದಂಬರಿಗಳಲ್ಲಿ ಯಶಸ್ವಿಯಾಗಿ ಮುಂದುವರಿಸಿ ಮಹತ್ವದ್ದನ್ನು ಸಾಧಿಸಿದರು

ಎನ್ನಬಹುದು. ಕಾರಂತರಲ್ಲಿ ಪ್ರಾರಂಭದಲ್ಲಿ ಸಮಾಜದ ನಡವಳಿಕೆಯ ವಿಮರ್ಶೆಯೇ ಪ್ರಧಾನವಾಗಿದ್ದರೆ ನಂತರ ಜೀವನದ ಯಥಾವತ್ತಾದ ಚಿತ್ರಣಕ್ಕೆ ಪ್ರಾಧಾನ್ಯ ಬಂದಿದೆ. ಕೊನೆಯಲ್ಲಿ ಎರಡರ 'ಸಮತೂಕವನ್ನು ಸಾಧಿಸಿದ್ದನ್ನು ಗಮನಿಸಬಹುದಾಗಿದೆ' ಎಂದು ವಿ. ಎಂ. ಇನಾಂದಾರ್ ಹೇಳುತ್ತಾರೆ (ಶಿವರಾಮ ಕಾರಂತ ಬದುಕು ಬರಹ: 1978)

ಕಾರಂತರು 'ಇರುವ' ಬದುಕನ್ನು ಚಿತ್ರಿಸಿ ತೃಪ್ತರಾಗುವ ಶೈಲಿಯ ವಾಸ್ತವವಾದಿ ಬರಹಗಾರರಲ್ಲ, 'ಇರಬೇಕಾದ' ಬದುಕನ್ನು ತೋರಿಸಲು ಅವರು ಸಮಾಜದ ಪಾತ್ರ, ಘಟನೆಗಳನ್ನು ಬಳಸಿಕೊಳ್ಳುವ ವಾಸ್ತವವಾದಿ ಬರಹಗಾರರು. ಕಾರಂತರ ಪ್ರಕಾರ, "ಇಂದಿನ ವಾಸ್ತವ ಸಾಹಿತಿಯ ಸಾಧನ, ನಾಳಿನ ವಾಸ್ತವ ಅವನ ಗುರಿ'.

ಕಾರಂತರ ಬರವಣಿಗೆಯ ವೇಗ ಅಸಾಧಾರಣವಾದುದಾಗಿತ್ತು. ಅವರು 'ಚೋಮನ ದುಡಿ'ಯನ್ನು 5 ದಿನಗಳಲ್ಲಿ, 'ಸರಸಮ್ಮನ ಸಮಾಧಿ'ಯನ್ನು 5 ದಿನಗಳಲ್ಲಿ ಮತ್ತು 'ಮರಳಿ ಮಣ್ಣಿಗೆ'ಯ 30 ಅಧ್ಯಾಯಗಳನ್ನು 30 ದಿನಗಳಲ್ಲಿ ಬರೆದುಮುಗಿಸಿದರಂತೆ. ಕಾರಂತರು ತಮ್ಮ ಕಾದಂಬರಿಗಳ ವಿನ್ಯಾಸವನ್ನು ಮೊದಲೇ ಮಾಡಿಕೊಂಡಿರುತ್ತಿದ್ದರು, ಮತ್ತು ವೇಗವಾಗಿ ಅದನ್ನು ತುಂಬಿಸುತ್ತಿದ್ದರು ಎಂದು ಊಹಿಸಬಹುದಾಗಿದೆ.

ಈ ರೀತಿ ತಮ್ಮ ವಿಸ್ತಾರವಾದ ಅನುಭವಪ್ರಪಂಚದಿಂದ ಪಾತ್ರಗಳನ್ನು, ಘಟನೆಗಳನ್ನು ಒಂದು ವಿನ್ಯಾಸಕ್ಕೆ ಅಳವಡಿಸಿಕೊಂಡು ತಾವು ಹೇಳಲು ಬಯಸಿದ್ದನ್ನು ಸಾಧಿಸುವ ರಚನಾ ವಿನ್ಯಾಸವನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದು. ಇಂತಹ ರಚನಾ ವಿನ್ಯಾಸಗಳ ಒಂದು ಸ್ಥೂಲ ಪರಿಚಯ ಈ ಪ್ರಬಂಧದ ಉದ್ದೇಶವಾಗಿದೆ.

ಕಾರಂತರ ಕಾದಂಬರಿಗಳ ರಚನಾ ವಿನ್ಯಾಸಗಳನ್ನು ವಿವರಿಸಲು ಭಾಷಾ ವಿಜ್ಞಾನದ ಪರಿಕಲ್ಪನೆಗಳನ್ನು ಬಳಸಿಕೊಂಡಿದ್ದೇನೆ.

ವಾಕ್ಯಗಳನ್ನು ರಚಿಸುವಾಗ ವಾಕ್ಯಾತ್ಮಕ (ಸಿಂಟಗ್ಮ್ಯಾಟಿಕ್ / syntagmatic) ಮತ್ತು ರೂಪಾವಳಿಯ (ಪಾರಡಿಗ್ಮ್ಯಾಟಿಕ್ /paradigmatic) ಸಂಬಂಧ ಅಥವಾ ಆಯ್ಕೆಗಳು ಇರುತ್ತವೆ.

'ವಾಕ್ಯಾತ್ಮಕ' ವಿನ್ಯಾಸಗಳಲ್ಲಿ ಮೂರು ವಿಧ. ಅ) ಒಂದು ಸರಳ ವಾಕ್ಯದಂತಿರುವ ಒಂದೇ ಕಥಾನಕ. ಆ) ಸಂಕೀರ್ಣ ವಾಕ್ಯಗಳಲ್ಲಿ ಎರಡು

ವಾಕ್ಯಗಳನ್ನು ಜೋಡಿಸುವ ರೀತಿಯಲ್ಲಿ ಎರಡು ಕಥಾನಕಗಳನ್ನು ಸಮಾನಾಂತರವಾಗಿ ಅಥವಾ ಸಂಕೀರ್ಣವಾಗಿ ಜೋಡಿಸುವುದು; ಇ) ಸಂಯುಕ್ತ ವಾಕ್ಯಗಳಂತೆ, ಎರಡು ಅಥವಾ ಮೂರು ವಾಕ್ಯಗಳನ್ನು ಒಂದರ ನಂತರ ಒಂದನ್ನು ಸೇರಿಸುವಂತೆ ಒಂದಾದಮೇಲೆ ಇನ್ನೊಂದರಂತೆ ಎರಡು ಅಥವಾ ಮೂರು (ಉದಾಹರಣೆಗೆ, ತಲೆಮಾರುಗಳ) ಕಥಾನಕಗಳನ್ನು ಜೋಡಿಸುವುದು.

**1. ವಾಕ್ಯಾತ್ಮಕ ವಿನ್ಯಾಸಗಳು:**

**ಅ) ಸರಳ ವಾಕ್ಯಾತ್ಮಕ ವಿನ್ಯಾಸ:** ಒಬ್ಬ ಕಥಾನಾಯಕನ ಬದುಕಿನ ಸುತ್ತ ಅಥವಾ ಘಟನೆಯ ಸುತ್ತ ಹಬ್ಬಿಕೊಂಡು ಸಾಗುವ ಕಥಾವಸ್ತುಗಳು ಈ ಮಾದರಿಯಲ್ಲಿ ಇರುತ್ತವೆ. 'ಚೋಮನ ದುಡಿ', 'ಬೆಟ್ಟದ ಜೀವ' ಇತ್ಯಾದಿ ಕಾದಂಬರಿಗಳು ಈ ಮಾದರಿಯಲ್ಲಿವೆ.

**ಆ) ಸಂಕೀರ್ಣ ವಾಕ್ಯಾತ್ಮಕ ವಿನ್ಯಾಸ:**

ಈ ರೀತಿಯ ವಾಕ್ಯಾತ್ಮಕ ವಿನ್ಯಾಸದಲ್ಲಿ ಎರಡು (ಅಥವಾ ಹೆಚ್ಚು) ವ್ಯಕ್ತಿಗಳ ಸಂಸಾರದ ಕತೆಗಳು ಅಕ್ಕಪಕ್ಕದಲ್ಲಿ ಸಾಗುತ್ತಾ ಒಂದಕ್ಕೊಂದು ಕಾಂಟ್ರಾಸ್ಟ್ ಆಗಿ ಸಾಗುವುದು ಸಾಮಾನ್ಯ. ಟಾಲ್‌ಸ್ಟಾಯ್ ಅವರ 'ಅನ್ನಾ ಕರೆನಿನಾ' ಈ ಮಾದರಿಯ ಶ್ರೇಷ್ಠ ರಚನೆ. ಜಾಗತಿಕ ಸಾಹಿತ್ಯದಲ್ಲಿ ಅತ್ಯಂತ ಶ್ರೇಷ್ಠ ಕಾದಂಬರಿ ಎಂಬ ಕೀರ್ತಿಗೆ ಈ ಕಾದಂಬರಿ ಪಾತ್ರವಾಗಿದೆ. ಇದರಲ್ಲಿ ಅನ್ನಾ ಕರೆನಿನಾ – ಅವಳ ಗಂಡ ಕರೆನಿನ್ ಮತ್ತು ಪ್ರೇಮಿ ವ್ರೋನ್‌ಸ್ಕಿ ಇವರ ಕಥಾನಕ ಒಂದು ಹಳಿಯಲ್ಲಿ ಸಾಗಿದರೆ ಸಮಾನಾಂತರವಾದ ಇನ್ನೊಂದು ಹಳಿಯಲ್ಲಿ ಕಿಟ್ಟಿ ಮತ್ತು ಲೆವಿನ್ ಇವರ ಸಂಸಾರದ ಕಥಾನಕ ಸಾಗುತ್ತಿರುತ್ತದೆ. ಟಾಲ್‌ಸ್ಟಾಯ್ ಅವರು ವೈಯಕ್ತಿಕ ಸ್ವಾರ್ಥ, ಸುಖಸಂತೋಷಗಳಿಗೆ ಮಾತ್ರ ಬೆಲೆಕೊಟ್ಟು ಸಮಾಜದ ಚಿಂತನೆಗೆ ವಿರೋಧವಾಗಿ ಹೋಗುವಾಗಿನ ದುರಂತವನ್ನು ಅನ್ನಾ – ಕರೆನಿನ್ ಸಂಸಾರದ ಮೂಲಕ ತೋರಿಸಿದರೆ, ಸಾರ್ಥಕ ಬದುಕು ಯಾವುದು ಎಂದು ತೋರಿಸುವುದಕ್ಕಾಗಿ ಕಿಟ್ಟಿ – ಲೆವಿನ್ ಸಂಸಾರದ ಕತೆಯನ್ನು ಸಮಾನಾಂತರವಾಗಿ ಹೆಣೆದಿದ್ದಾರೆ. ಇದು, ಸಂಕೀರ್ಣ ವಾಕ್ಯಗಳಂತಹ ಸಂರಚನೆಯನ್ನು ಹೊಂದಿರುವ ಕಥಾ ಸಂವಿಧಾನ.

ಇದೇ ರೀತಿಯ ಸಂಕೀರ್ಣ ವಾಕ್ಯಾತ್ಮಕ ವಿನ್ಯಾಸ ಕಾರಂತರಲ್ಲಿಯೂ ಇದೆ. ಅವರ 'ಒಡಹುಟ್ಟಿದವರು' ಕಾದಂಬರಿ ಇದಕ್ಕೊಂದು ಉದಾಹರಣೆಯಾಗಿದೆ. ಅಕ್ಕತಂಗಿಯರಾದ ವಾಸಂತಿ ಮತ್ತು ಶೇವಂತಿ ಇವರ ಸಂಸಾರಗಳ ಚಿತ್ರಣ ಈ ಕಾದಂಬರಿಯಲ್ಲಿದೆ. ಅಕ್ಕ ವಾಸಂತಿ ಸುಧಾಕರನನ್ನು ಮದುವೆಯಾಗಿ ತಾಳ್ಮೆಯಿಂದ

ಅವನನ್ನು ಸಹಿಸಿಕೊಂಡು ದಾಂಪತ್ಯವನ್ನು ಉಳಿಸಿಕೊಳ್ಳುತ್ತಾಳೆ. ತಂಗಿ ಶೇವಂತಿ ಗಂಡ ವಾಸುದೇವನಿಗೆ ಸಹಕಾರಿಯಾಗಿರದೆ ದೂರವಾಗುತ್ತಾಳೆ. ಮದುವೆ, ಸಂಸಾರಗಳನ್ನು ಕುರಿತ ಸಮತೂಕದ ದೃಷ್ಟಿಯ ಪ್ರತಿಪಾದನೆಗೆ ಕಾರಂತರು ಹೀಗೆ ಎರಡು ಸಂಸಾರಗಳನ್ನು ಎದುರುಬದುರಾಗಿ ನಿಲ್ಲಿಸುತ್ತಾರೆ. ಅವು: ಅ) ವಾಸಂತಿ – ಸುಧಾಕರ; ಆ) ಶೇವಂತಿ – ವಾಸುದೇವ.

**ಇ) ಸಂಯುಕ್ತ ವಾಕ್ಯಾತ್ಮಕ ವಿನ್ಯಾಸ :**

ಒಂದರ ನಂತರ ಇನ್ನೊಂದು ವಾಕ್ಯಗಳನ್ನು ಜೋಡಿಸುತ್ತಾ ಮುಂದುವರಿಸಿಕೊಂಡು ಹೋಗುವ ವಾಕ್ಯಗಳ ಕೂಟಕ್ಕೆ ಸಂಯುಕ್ತ ವಾಕ್ಯ ಎಂದು ಕರೆಯುತ್ತಾರೆ. ಇವುಗಳು ಕಾಲಾನುಕ್ರಮದಲ್ಲಿ ಒಂದರ ನಂತರ ಬರುವುದು ಸಾಮಾನ್ಯ. ಕಾದಂಬರಿಗಳಲ್ಲಿ ಒಂದು ತಲೆಮಾರಿನ ಕಥಾನಕದ ನಂತರ ಇನ್ನೊಂದು ತಲೆಮಾರಿನ ಕಥಾನಕ, ಅದರ ನಂತರ ಇನ್ನೊಂದು ಹೀಗೆ ಮುಂದುವರಿಸಿಕೊಂಡು ಹೋದಾಗ ಇಂತಹ ಸಂಯುಕ್ತ ವಾಕ್ಯಾತ್ಮಕ ವಿನ್ಯಾಸಗಳು ಉಂಟಾಗುತ್ತವೆ. ಕಾರಂತರ 'ಮರಳಿ ಮಣ್ಣಿಗೆ' ಇದಕ್ಕೊಂದು ಉದಾಹರಣೆಯಾಗಿದೆ. ಇದರಲ್ಲಿ ಪುರೋಹಿತರೂ ಕೃಷಿಕರೂ ಆಗಿರುವ ರಾಮೈತಾಳರ ಸಾಂಸಾರಿಕ ಬದುಕಿನ ಚಿತ್ರಣದ ಮೂಲಕ ಕಾದಂಬರಿ ಪ್ರಾರಂಭವಾಗುತ್ತದೆ. ಅವರ ಜತೆಗೆ ಪತ್ನಿ ಪಾರ್ವತಿ ಮತ್ತು ತಂಗಿ, ವಿಧವೆ ಸರಸ್ವತಿ ಬದುಕುತ್ತಾ ಅವರ ಶ್ರಮಜೀವನದ ಪಾಲುಗಾರರಾಗಿರುತ್ತಾರೆ. ಪಾರ್ವತಿಯಲ್ಲಿ ಮಕ್ಕಳಾಗಲಿಲ್ಲವೆಂದು ಐತಾಳರು ಸತ್ಯಭಾಮೆ ಎಂಬವಳನ್ನು ಎರಡನೆಯ ಹೆಂಡತಿಯಾಗಿ ತಂದುಕೊಳ್ಳುತ್ತಾರೆ. ಆವಳಿಗೆ ಲಚ್ಚ ಮತ್ತು ಸುಬ್ಬಿ ಎಂಬ ಇಬ್ಬರು ಮಕ್ಕಳು ಹುಟ್ಟುತ್ತಾರೆ.

ಲಚ್ಚನ ವಿದ್ಯಾಭ್ಯಾಸ, ಅವನ ದುರಭ್ಯಾಸಗಳು, ಅವನು ನಾಗವೇಣಿ ಎಂಬವಳನ್ನು ಮದುವೆಯಾಗುವುದು, ನಾಗವೇಣಿಯ ಕಷ್ಟಗಳು, ಲಚ್ಚ ಊರು ಬಿಡುವುದು ಇತ್ಯಾದಿ ಎರಡನೆಯ ತಲೆಮಾರಿನ ಕತೆಯ ಮೂಲಕ ಕಾದಂಬರಿ ಮುಂದುವರಿಯುತ್ತದೆ.

ಲಚ್ಚನ ಮಗ ರಾಮನು ಬಹಳ ಕಷ್ಟದಿಂದ ವಿದ್ಯಾಭ್ಯಾಸ ಪಡೆದು ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಾ, ಸುಸಂಸ್ಕೃತನಾಗಿ ಊರಿಗೆ ಮರಳಿ ತಾಯಿಯೊಡನೆ ಬದುಕಲಾರಂಭಿಸುವುದು ಮೂರನೆಯ ತಲೆಮಾರಿನ ಕಥಾನಕ. ಈ ಕಾದಂಬರಿಯ ಸಂಯುಕ್ತ ವಾಕ್ಯಾತ್ಮಕ ವಿನ್ಯಾಸವನ್ನು ಹೀಗೆ ತೋರಿಸಬಹುದು:

| | | |
|---|---|---|
| ರಾಮೈತಾಳರು–ಪಾರ್ವತಿ–ಲಚ್ಚ<br>ಸತ್ಯಭಾಮೆ–ಸರಸೋತಿ | ಲಚ್ಚ – ನಾಗವೇಣಿ | ರಾಮ |

**2. ರೂಪಾವಳಿಯ ವಿನ್ಯಾಸಗಳು:**

ವಾಕ್ಯಗಳಲ್ಲಿ ಯಾವುದಾದರೊಂದು ಘಟಕಕ್ಕೆ ಆಯ್ಕೆಗಳನ್ನು ಕೊಟ್ಟಾಗ ವಿವಿಧ ಅರ್ಥಭೇದಗಳು ಉಂಟಾಗುವಂತೆ ಒಂದು ನಿರ್ದಿಷ್ಟ ಕಥಾನಕಕ್ಕೆ ಪೂರಕವಾದ ಎರಡು ಮೂರು ಸಮಾನಾಂತರ ಪಾತ್ರಗಳನ್ನು ತರುವುದರಿಂದ ರೂಪಾವಳಿಯ ವಿನ್ಯಾಸ ಉಂಟಾಗುತ್ತದೆ. ಅಂದರೆ ಇಲ್ಲಿ ಕತೆ ಒಂದೇ, ಅದಕ್ಕೆ ಪೂರಕವಾಗಿ ಒಂದು ನಿರ್ದಿಷ್ಟ ಆಶಯದ ಪರಿಶೀಲನೆಯ ಮಟ್ಟಿಗೆ ಮಾತ್ರ ಎರಡು/ಮೂರು/ನಾಲ್ಕು ಉಪಾಖ್ಯಾನಗಳು ನಡುವೆ ಸೇರಿಕೊಳ್ಳುತ್ತವೆ. ಈ ಉಪಾಖ್ಯಾನಗಳಲ್ಲಿ ಯವುದಾದರೊಂದನ್ನು ಬಿಟ್ಟರೆ ಕೂಡ ಕತೆಯ ಓಟಕ್ಕೆ ತೊಂದರೆಯಿಲ್ಲ.

ಇದಕ್ಕೆ ಉದಾಹರಣೆಯಾಗಿ ಕಾರಂತರ 'ಸರಸಮ್ಮನ ಸಮಾಧಿ' ಮತ್ತು 'ಅಳಿದ ಮೇಲೆ' ಕಾದಂಬರಿಗಳನ್ನು ತೋರಿಸಬಹುದು.

| | |
|---|---|
| ಸರಸಮ್ಮನ ಸಮಾಧಿ:<br>ಬೆಳ್ಯಕ್ಕನ ಭೂತದ ನೆವನವಾಗಿ<br>ದಾಂಪತ್ಯದ ವಿವಿಧ ಆಯಾಮಗಳ<br>ಪರಿಶೀಲನೆ (ಚಂದ್ರಯ್ಯ<br>ಭೂತವನ್ನು ನೋಡಲು ಕಾದುಕುಳಿತಿರುವಾಗ<br>ಕಾಣುವ ದಂಪತಿಗಳು) | ತಮ್ಮಪ್ಪ – ಜಾನಕಿ<br><br>ಅಣ್ಣಪ್ಪಯ್ಯ – ಸುನಾಲಿ<br><br>ಸೀತಾರಾಮ – ನಾಗವೇಣಿ<br>ಹಿರಣ್ಯ – ಭಾಗೀರಥಿ |

ದಾಂಪತ್ಯ ಜೀವನದ ವಿವಿಧ ಆಯಾಮಗಳ ಪರಿಶೀಲನೆಗಾಗಿ ಈ ರೀತಿ ನಾಲ್ಕು ಜೋಡಿಗಳನ್ನು ರೂಪಾವಳಿಯ ವಿನ್ಯಾಸದಲ್ಲಿಟ್ಟು ಕಾರಂತರು ಪರಿಶೀಲಿಸುತ್ತಾರೆ.

'ಅಳಿದ ಮೇಲೆ' ಕಾದಂಬರಿಯಲ್ಲಿ ನಿರೂಪಕ ಕಾರಂತರು ತಮಗೆ ರೈಲಿನಲ್ಲಿ ಪರಿಚಿತರಾಗಿದ್ದ ಮುಂಬಯಿವಾಸಿ ಯಶವಂತರಾಯರು ತೀರಿಕೊಂಡ ಮೇಲೆ ಅವರ ಬದುಕಿಗೆ ಸಂಬಂಧಿಸಿದ ಕೆಲವು ವ್ಯಕ್ತಿಗಳನ್ನು ಭೇಟಿಮಾಡುತ್ತಾರೆ. ಆ ಮೂಲಕ ಯಶವಂತರಾಯರ ಬದುಕಿನ ಸಮಗ್ರ ಚಿತ್ರವನ್ನು ಪಡೆಯುವುದಲ್ಲದೆ ಬದುಕಿನ ಸಾರ್ಥಕ್ಯ ಯಾವುದರಲ್ಲಿ ಎಂಬ ಅಂಶವನ್ನೂ ಪರಿಶೀಲಿಸುತ್ತಾರೆ. ಹೀಗೆ ನಿರೂಪಕ ಭೇಟಿಯಾಗುವ ವ್ಯಕ್ತಿಗಳೆಂದರೆ ರಾಯರನ್ನು ಬಾಲ್ಯದಲ್ಲಿ ಅಕ್ಕರೆಯಿಂದ

ನೋಡಿಕೊಂಡಿದ್ದ ಮುದುಕಿ ಪಾರ್ವತಿ, ರಾಯರ ಮಡದಿ ಮತ್ತು ಅವಳ ಪ್ರಿಯಕರ ವಕೀಲ ಸೀತಾರಾಮ ಹೆಗಡೆ, ರಾಯರ ಮಗಳು, ಅಳಿಯ ಮತ್ತು ರಾಯರ ಚಿಂತಕ ಮಿತ್ರ ವಿಷ್ಣುಪಂತ ಘಾಟೆ. ರಾಯರಿಗೆ ನಿರ್ಮಲ ಪ್ರೀತಿಯನ್ನು ಕೊಟ್ಟಿದ್ದ ವೇಶ್ಯೆ ಸರಸಿ ಮತ್ತು ಮುಂಬಯಿಯಲ್ಲಿ ಪ್ರೇಯಸಿಯಾದ ಸ್ವಾರ್ಥಿ ಹೆಂಗಸು ಮೇರಿ ಇವರನ್ನು ನಿರೂಪಕ ಭೇಟಿ ಆಗುವುದಿಲ್ಲವಾದರೂ ಈ ಪಾತ್ರಗಳು ಒಂದಕ್ಕೊಂದು ವಿರುದ್ಧವಾಗಿ ಚಿತ್ರಿಸಲ್ಪಟ್ಟಿರುವುದನ್ನು ಗಮನಿಸಬಹುದು.

**3. ಜಟಿಲ ವಾಕ್ಯಾತ್ಮಕ ವಿನ್ಯಾಸ :**

ರೂಪಾವಳಿಯ ವಿನ್ಯಾಸದ ಕಥನಕ್ಕೆ ಸಂಯುಕ್ತ ವಾಕ್ಯಾತ್ಮಕ ವಿನ್ಯಾಸವೂ ಸೇರಿದಾಗ ಜಟಿಲ ವಾಕ್ಯಾತ್ಮಕ ವಿನ್ಯಾಸ ಉಂಟಾಗುತ್ತದೆ. ಇದನ್ನು ನಿಭಾಯಿಸಲು ಕಾದಂಬರಿಕಾರನಿಗೆ ಬಹಳ ವ್ಯವಧಾನ ಬೇಕು, ಧಾರಣಾ ಸಾಮರ್ಥ್ಯ ಬೇಕು. ಕಾರಂತರು 'ಧರ್ಮರಾಯನ ಸಂಸಾರ' ಕಾದಂಬರಿಯಲ್ಲಿ ಇಂತಹ ವಿನ್ಯಾಸವನ್ನು ಬಳಸಿಕೊಂಡಿದ್ದಾರೆ. (ಒಂದು ತಲೆಮಾರಿನಲ್ಲಿ ಮೂವರು ವ್ಯಕ್ತಿಗಳ ಬದುಕು – ರೂಪಾವಳಿಯ ವಿನ್ಯಾಸ ಮತ್ತು ನಂತರದ ತಲೆಮಾರಿನ ಬದುಕು – ಸಂಯುಕ್ತ ವಾಕ್ಯಾತ್ಮಕ ವಿನ್ಯಾಸ).

ಇಲ್ಲಿ ಕಾದಂಬರಿಕಾರರು ಕೊಕ್ಕರಣೆ ರಾಮಪ್ಪಯ್ಯನನ್ನು 'ಧರ್ಮರಾಯ' ಎಂದು ಕರೆಯುತ್ತಾರೆ. ಅವನು ಮನೆತನದ ಹಿರಿಮೆ, ಧಾರಾಳತನವನ್ನು ಮೆರೆಸಲು ಹೋಗಿ ತನ್ನ ಹೆಂಡತಿ ಪದ್ಮಾವತಿಯನ್ನು ನಿರ್ಗತಿಕಳನ್ನಾಗಿ ಮಾಡಿಹೋಗುತ್ತಾನೆ. ಅವರ ಸಂಸಾರದ ಕತೆ ಇದು. ಇನ್ನಿಬ್ಬರು ಪ್ರಧಾನ ವ್ಯಕ್ತಿಗಳು ನಾರಾಯಣ ಹೆಬ್ಬಾರ ಮತ್ತು ಮಹಾಬಲಯ್ಯ. ಮೊದಲನೆಯ ತಲೆಮಾರಿನಲ್ಲಿ ಮೂರು ಪ್ರಧಾನ ವ್ಯಕ್ತಿಗಳ ಬದುಕನ್ನು ಪರಿಶೀಲಿಸಲಾಗಿದೆ. ಇದಕ್ಕೆ ಕೊಂಡಿಯಾಗಿರುವವರು ಪುರೋಹಿತ ಲಚ್ಚ ಐತಾಳರು.

ವಿಧವೆಯಾದ ಪದ್ಮಾವತಿಯ ಆಸ್ತಿಯನ್ನು ಹೆಬ್ಬಾರ ಲಪಟಾಯಿಸಿ ಅವಳನ್ನು ನಿರ್ಗತಿಕಳನ್ನಾಗಿ ಮಾಡುತ್ತಾನೆ. ಅವಳ ಮಗ ನಾಗಪ್ಪಯ್ಯ ಬದುಕಿನಲ್ಲಿ ಯಶಸ್ವಿಯಾಗುವ ಕತೆ ಎರಡನೆಯ ತಲೆಮಾರಿನ ಕಥಾನಕದಲ್ಲಿದೆ.

ಈ ಕಾದಂಬರಿಯ ಜಟಿಲ ವಿನ್ಯಾಸವನ್ನು ವಿ. ಎಂ. ಇನಾಂದಾರ್ ಅವರು ಗ್ರಹಿಸಿರುವುದು ಹೀಗೆ: "ಈ ಕಾದಂಬರಿಯ ರಚನೆಯನ್ನು ನೆನೆದಾಗ 'ಮರಳಿ

ಮಣ್ಣಿಗೆ'ಯಲ್ಲಿ ಪಾತ್ರ ವೈವಿಧ್ಯ ಜೀವನ ವಿಸ್ತಾರಗಳಿದ್ದರೂ ಅದರ ರಚನೆ ಸಡಿಲವಾದದ್ದೆನಿಸುತ್ತದೆ.... ಮೂರು ಮನೆತನಗಳ ಎರಡು ತಲೆಮಾರುಗಳ ಕಥೆ ಸಂಕೀರ್ಣವಾಗಿ ಹೆಣೆದುಕೊಂಡು ನಿಂತ ಈ ಕಾದಂಬರಿಯ ಏಕಾಗ್ರ ರಚನಾವಿಧಾನ ಒಂದು ಪರಿಣತ ತಂತ್ರಸಿದ್ಧಿಯಾಗಿದ್ದಂತೆ ಪದರುಪದರಾಗಿ ಬಿಚ್ಚಿಕೊಳ್ಳುವ ಅದರ ಅರ್ಥಸಂಪತ್ತಿ ವಿಶ್ಲೇಷಣೆಗೊಂದು ಆಹ್ವಾನವಾಗಿದೆ." (1978)

**ಈ ರೀತಿಯ ಅಧ್ಯಯನದಿಂದ ಪ್ರಯೋಜನವೇನು?**

ಕಾರಂತರ ಕಾದಂಬರಿಗಳ ವಿನ್ಯಾಸವನ್ನು ತಿಳಿದರೆ ಆ ಕೃತಿಗಳ ಒಟ್ಟು ಗ್ರಹಿಕೆ ಸುಲಭವಾಗುವುದು. ಕೃತಿಯೆಂಬ ಕಟ್ಟಡದ ನೀಲಿ ನಕಾಶೆಯಂತೆ ಇವು ಇರುವುದರಿಂದ ಒಂದು ಒಟ್ಟು ನೋಟ ಲಭ್ಯವಾಗುವುದು. ಕೃತಿಯೊಂದನ್ನು ಸಮಗ್ರವಾಗಿ ಗ್ರಹಿಸಲು ನೆರವಾಗುವುದು. ಇದರಿಂದ ಒಂದು ಮುಖ್ಯ ಆಶಯಕ್ಕೆ ಅನುಗುಣವಾಗಿ ಪಾತ್ರಗಳನ್ನು ಸೃಷ್ಟಿಸಿರುವುದು ಓದುಗನ ಅರಿವಿಗೆ ಬರುವುದರಿಂದ ಕೃತಿಯ ಅರ್ಥಗ್ರಹಿಕೆ ಸುಲಭವಾಗುವುದು. ಈ ಪಾತ್ರಗಳ ತೌಲನಿಕ ಅಧ್ಯಯನಕ್ಕೆ ಇದು ಪ್ರೇರಣೆ ನೀಡುವುದು. ಹಾಗಾಗಿ ಈ ಅಧ್ಯಯನ ಯಾವುದೇ ಅಧ್ಯಯನಕ್ಕೆ ಪೂರಕವಾಗಿರುವುದು. ಅಂದರೆ ಇದು ಮುಂದಿನ ವಿಶ್ಲೇಷಣೆಗೆ ದಾರಿಯನ್ನು ಸುಗಮ ಮಾಡಿಕೊಡುವುದು.

ಎರಡು ವಿಷಯಗಳನ್ನು ನೆನಪಿನಲ್ಲಿ ಇರಿಸಿಕೊಳ್ಳಬೇಕು. ಒಂದು, ಸ್ವತಃ ಈ ವಿನ್ಯಾಸ ಯಾವುದೇ ಮೌಲ್ಯಮಾಪನವನ್ನು ಮಾಡುವುದಿಲ್ಲ. ಯಾವುದೇ ವಿನ್ಯಾಸವುಳ್ಳ ಕೃತಿ ಅದರಷ್ಟಕ್ಕೆ ಶ್ರೇಷ್ಠವೂ ಅಲ್ಲ, ಕನಿಷ್ಠವೂ ಅಲ್ಲ.

ಎರಡು, ರಚನಾ ವಿನ್ಯಾಸ ಹೇಗಿದೆ ಅನ್ನುವುದರಿಂದ ಕಾದಂಬರಿಯ ಜನಪ್ರಿಯತೆಯಾಗಲಿ, ಸಫಲತೆಯಾಗಲಿ ನಿರ್ಧಾರಿತವಾಗುವುದಿಲ್ಲ. ಉದಾಹರಣೆಗೆ, ಸರಳ ವಿನ್ಯಾಸದ ಕೃತಿಗಳಾದ 'ಚೋಮನ ದುಡಿ' ಮತ್ತು 'ಬೆಟ್ಟದ ಜೀವ'ಗಳು ಜಟಿಲ ವಿನ್ಯಾಸದ 'ಧರ್ಮರಾಯನ ಸಂಸಾರ'ಕ್ಕಿಂತ ಜನಪ್ರಿಯವಾಗಿವೆ. ಆದರೆ ಅವೇ ಶ್ರೇಷ್ಠವೇ? ಅದು ಬೇರೆಯೇ ಚರ್ಚಿಸಬೇಕಾದ ಪ್ರಶ್ನೆ. ವಿ. ಎಂ. ಇನಾಂದಾರ್ ಅವರು 'ಧರ್ಮರಾಯನ ಸಂಸಾರ' ಕಾರಂತರ ಕೃತಿಗಳಲ್ಲಿ 'ಮರಳಿ ಮಣ್ಣಿಗೆ'ಯಷ್ಟೇ ಶ್ರೇಷ್ಠ (ಅಂದರೆ 'ಚೋಮನ ದುಡಿ' ಹಾಗೂ 'ಬೆಟ್ಟದ ಜೀವ'ಗಳಿಗಿಂತ ಶ್ರೇಷ್ಠ ಅನ್ನುವುದು ಸ್ವಯಂವೇದ್ಯ) ಎಂದು ಹೇಳಿರುವುದನ್ನು ಮರೆಯಬಾರದು.

# ವಿಶ್ವಮಾನವ ಕಾರಂತರು

– ಪ್ರಾ. ಚಂದ್ರಶೇಖರ ಚಡಗ

1902ರ ಅಕ್ಟೋಬರ 10ರಂದು ಶ್ರೀ ಶೇಷ ಕಾರಂತ ಮತ್ತು ಶ್ರೀಮತಿ ಲಕ್ಷ್ಮೀಯವರ ಐದನೆಯ ಮಗನಾಗಿ ಪಡು ಕಡಲ ತೀರದ ಉಡುಪಿ ತಾಲೂಕಿನ ಕೋಟ ಎಂಬ ಹಳ್ಳಿಯೊಂದರಲ್ಲಿ ಹುಟ್ಟಿ ಗಿಳಿಯಾರು, ಕುಂದಾಪುರಗಳಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮುಗಿಸಿ, ಮಂಗಳೂರಿನಲ್ಲಿ ಉನ್ನತ ಶಿಕ್ಷಣವನ್ನು ಪಡೆಯುತ್ತಿರುವಾಗಲೇ ಗಾಂಧೀಜಿಯವರ ಕರೆಗೆ ಓಗೊಟ್ಟು ಕಾಲೇಜನ್ನು ತ್ಯಜಿಸಿ ಮುಂದೆ ಖಾದೀ ಪ್ರಚಾರ, ಹರಿಜನೋದ್ಧಾರ, ಮುಂತಾದ ವಿಧಾಯಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನರ ಜೀವನವನ್ನು ಇನ್ನಷ್ಟು ಶ್ರೀಮಂತಗೊಳಿಸಬೇಕೆಂಬ ಆಕಾಂಕ್ಷೆಯಿಂದ ಪತ್ರಕರ್ತರಾಗಿ, ಸಾಹಿತಿಯಾಗಿ, ವಿಚಾರವಾದಿಯಾಗಿ, ಕಲಾಭಿಮಾನಿಯಾಗಿ, ಕಲಾತಜ್ಞನಾಗಿ, ವಿಜ್ಞಾನ ಲೇಖಕನಾಗಿ, ಶಿಕ್ಷಣ ತಜ್ಞರಾಗಿ ಹುಚ್ಚು ಮನಸ್ಸಿನ ಹತ್ತು ಮುಖಗಳಿಂದಲೂ ಇಪ್ಪತ್ತು ಕೈಗಳಿಂದಲೂ ಮಾಡಿದ ಸಾಧನೆಯಿಂದ ತಮ್ಮ ಜೀವನ ಕಾಲದಲ್ಲಿಯೆ ಸಾಹಸಕ್ಕೊಂದು ಸಂಕೇತವಾದ ಶಿವರಾಮ ಕಾರಂತರು ನಿಜವಾದ ಅರ್ಥದಲ್ಲಿ ವಿಶ್ವಮಾನವ ಎಂಬ ಬಿರುದಿಗೆ ಅರ್ಹರು.

ನಮ್ಮ ಭಾರತೀಯ ಮೌಲ್ಯಗಳನ್ನು ಒಪ್ಪಿಕೊಂಡರೂ, ಮೌಢ್ಯಗಳ ವಿರುದ್ಧ ಬಂಡಾಯದ ಬಾವುಟವನ್ನು ಎತ್ತಿ ಏಕಾಂಗಿಯಾಗಿ ಹೋರಾಡಿದ ಈ ವೀರ, ಕನ್ನಡ ಪ್ರೇಮಿಯಾಗಿದ್ದರು. ಅವರು 'ಕನ್ನಡದ ಉಟ್ಟು ಓರಾಟಗಾರರಂತೆ', ಇಂಗ್ಲಿಷ್ ಭಾಷೆಯನ್ನು ತಿರಸ್ಕರಿಸುವ ಬದಲು ಇಂಗ್ಲೀಷಿನ ಸಾವಿರಾರು ಒಳ್ಳೆಯ ಗ್ರಂಥಗಳನ್ನು ಓದಿ ಅಂತಹ ಕೃತಿಗಳು ಕನ್ನಡದಲ್ಲಿ ಬರಬಾರದೇ ಎಂದು ಹಳಹಳಿಸಿ ತನ್ನ ಪಾಡಿಗೆ ತಾನು ಈ ದಿಸೆಯಲ್ಲಿ ಎಷ್ಟೊ ಸಾಧ್ಯವೋ, ಅಷ್ಟನ್ನು ಮಾಡಿದ ಮಹಾನುಭಾವರು. ಪ್ರಾಥಮಿಕ ಹಂತದಲ್ಲಿ ಮಗುವಿಗೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣವನ್ನು ಕೊಡಬೇಕು ಎಂದು ಧೃಡವಾಗಿ ನಂಬಿದ್ದ, ಕರ್ನಾಟಕ ಏಕೀಕರಣಕ್ಕಾಗಿ ನಾಡಿನಾದ್ಯಂತ ಕಾಲಿಗೆ ಗಾಲಿ ಕಟ್ಟಿಕೊಂಡು ಓಡಾಡಿದ ಈ ಮನುಷ್ಯ ನಿಧನರಾದಾಗ ನಿಜವಾಗಿಯೂ ಅನಿಕೇತನರಾಗಿದ್ದರು. ಅನುಭವ ಜನ್ಯವಾದ ಸಾಹಿತ್ಯವನ್ನು ನಾಡಿಗೆ ಕೊಟ್ಟು ಕಾರಂತರು ಪುತ್ತೂರು ತಾಲ್ಲೂಕಿನಲ್ಲಿ ಕೃಷಿ ಕಾರ್ಮಿಕರಾಗಿ ಒಂದು ತುಂಡು ಭೂಮಿಗೂ ಒಡೆಯನಾಗಲು ಸಾಧ್ಯವಿಲ್ಲದಂತಹ ಹರಿಜನರ ಕಣ್ಣೀರಿನ ಕತೆಯನ್ನು 1933ರಷ್ಟು ಹಿಂದೆಯೇ ಬರೆದ "ಚೋಮನ ದುಡಿ" ಭಾರತೀಯ ಸಾಹಿತ್ಯದಲ್ಲೇ ದಲಿತನೊಬ್ಬನ ಜೀವನದ

ಮೌಲಿಕವೂ ಅತ್ಯಂತ ಸಶಕ್ತ ನಿರೂಪಣೆಯೂ ಆಗಿದೆ. ಹಿಂದಿ ಸಾಹಿತ್ಯದಲ್ಲಿ ಪ್ರೇಮಚಂದರ "ಗೋದಾನ" ಕಾದಂಬರಿಯ ಹೋರಿರಾಮನಂತೆ ಚೋಮನದುಡಿಯ ಜೋಮ ಈಗ ದಲಿತರ ಪ್ರತಿಮೆಯಾಗಿದ್ದಾನೆ. ವಿಮರ್ಶಕ ಜಿ. ರಾಜಶೇಖರ್ ಹೇಳಿದಂತೆ 'ಚೋಮನ ದುಡಿ' ಎಂತಹ ದೊಡ್ಡ ಕೃತಿ! ನಾನು ಎಷ್ಟು ಸಾರಿ ಓದಿದೇನೋ ಹೇಳಲಾರೆ!

"ಅವರಿಗೆ ದಲಿತರ ಬಗ್ಗೆ ಬರೆಯಲು ಹಕ್ಕಿಲ್ಲ ಎಂದು ಹೇಳುವುದು ನಾನ್ಸೆನ್ಸ್ ಆ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸುವುದೇ ಒಂದು ಅಪರಾಧ. ಮೊನ್ನೆ, ಒಂದು ತಿಂಗಳ ಹಿಂದೆ, ಅದನ್ನು ಓದಿದಾಗ ಅನಿಸಿದ್ದು – ದಲಿತರ ಜೀವನದ ಎಷ್ಟು ನಲಿವುಗಳನ್ನೂ ಅವರು ಚಿತ್ರಿಸಿದ್ದಾರಲ್ಲ ಎಂದು ಇಡೀ ಕಾದಂಬರಿಯನ್ನು ಒಂದು ಲಾಘವದಲ್ಲಿ ಹೇಳಿದ್ದಾರೆ. ಚೋಮನ ಬದುಕಿನಲ್ಲಿ ಬರೇ ಕತ್ತಲು ಇಲ್ಲ. ಅಲ್ಲಿ ನಗು, ಹಾಸ್ಯ, ಪ್ರೀತಿ ಇದೆ. ವಿಯೋಗದ ದುಃಖ ಇದೆ. ನೃತ್ಯ ಹಾಡು, ಕುಡಿತ ಇದೆ, ಕುಣಿತ ಇದೆ. ಕಡೆಗೂ ದಲಿತ ಕುಟುಂಬವೊಂದರ ವಿಘಟನೆಯಾಗುತ್ತಿರುವುದು ಒಂದು ದೊಡ್ಡ ದುರಂತ ಅಂತ ಹೇಳ್ತಾ ಬರೆದಿದ್ದಾರೆ – ರಿಮಾರ್ಕಬಲ್! ಕಾರಂತರು ದಲಿತ ಕುಟುಂಬವೊಂದರ ವಿಘಟನೆ ಯಾವುದೇ ಕುಟುಂಬದ ವಿಘಟನೆಯಷ್ಟೆ. ದೊಡ್ಡ ದುರಂತ ಎಂದು ಚಿತ್ರಿಸಿದ್ದಾರಲ್ಲ ಅದು ನಮ್ಮ ಅನೇಕ ಪ್ರಗತಿಶೀಲರಿಗೆ ಈವತ್ತಿಗೂ ಅರ್ಥವಾಗಿಲ್ಲ". ಕಾರಂತರು ದಂತಗೋಪುರದಲ್ಲಿ ಕುಳಿತು ಸಾಹಿತ್ಯ ಸೃಷ್ಟಿ ಮಾಡದೆ ತಾವು ಗಳಿಸಿದ ಅನುಭವವನ್ನೇ ಕೃತಿಯಾಗಿ ಭಟ್ಟಿ ಇಳಿಸಿರುವುದರಿಂದ ಇವತ್ತಿಗೂ ಅವರ ಸಾಹಿತ್ಯವನ್ನು ಜನ ಓದುತ್ತಾರೆ, ಗೌರವಿಸುತ್ತಾರೆ. ಚೋಮನ ದುಡಿ ಬರೆಯುವ ಮುಂಚೆ ಕಾರಂತರು ಹರಿಜನ ಕೇರಿಗಳ ಸರ್ವೆ ಮಾಡಿದ್ದರು ಎಂಬುದನ್ನು ಮರೆಯಬಾರದು. ವೇಶ್ಯೆಯ ಮಕ್ಕಳೂ ಮದುವೆಯಾಗಿ ಇತರರಂತೆ ಬದುಕಬೇಕೆಂದು ಅದಕ್ಕಾಗಿ ಪ್ರಯತ್ನಿಸಿದ ಕಾರಂತರನ್ನು ಎಷ್ಟೋ ಜನ ವೇಶ್ಯೆಯರು ಅವರ ಭಾವಚಿತ್ರವನ್ನು ಇಟ್ಟು ಇಂದಿಗೂ ಪೂಜಿಸುತ್ತಾರೆ ಎಂದು ಶ್ರೀ ಜಯಂತ ಕಾಯ್ಕಿಣಿ ಒಮ್ಮೆ ಹೇಳಿದ್ದಾರೆ. ಆದರೆ ಗಾಂಧೀಜಿ ವೇಶ್ಯೆಯರ ಸಮಸ್ಯೆಗೆ ಸೂಚಿಸಿದ ಪರಿಹಾರ ಕಾರಂತರಿಗೆ ಒಪ್ಪಿಗೆ ಆಗದಿದ್ದುದರಿಂದ ಅವರು ಗಾಂಧೀಜಿಯ ಅನುಯಾಯಿಯಾಗಿ ಮುಂದುವರಿಯಲಿಲ್ಲ. ಗಾಂಧಿ ಹೇಳಿದ ಆಜೀವನ ಬ್ರಹ್ಮಚರ್ಯವು ಅನೈಸರ್ಗಿಕ ಎನ್ನುವುದು ಕಾರಂತರ ವಿಚಾರವಾಗಿತ್ತು.

ಕಾರಂತರು ಜಾತಿ ಪದ್ಧತಿಯನ್ನು ಕೇವಲ ಭಾಷಣದಲ್ಲಿ ಖಂಡಿಸಿ ಒಳಗೊಳಗೆ ಜಾತಿಯ ಭಾವನೆಗಳನ್ನು ತುಂಬಿಕೊಂಡಿರುವ ಗೋಮುಖ ವ್ಯಾಘ್ರರಾಗಿರಲಿಲ್ಲ. ನುಡಿದಂತೆ ನಡೆದ ಅಪರೂಪದ ಮಾನವರಲ್ಲಿ ಕಾರಂತರಂಥವರು ಬಹಳ ಜನ

ಸಿಕ್ಕಲಿಕ್ಕಿಲ್ಲ. ದೇವರ ಅಸ್ತಿತ್ವವನ್ನು ಕುರಿತು ತಲೆ ಕೆಡಿಸಿಕೊಳ್ಳದೆಯೇ ಒಳ್ಳೆಯ ಬಾಳನ್ನು ಸಾಧ್ಯ ಎಂದು ಬದುಕಿನುದ್ದಕ್ಕೂ ಘೋಷಿಸಿದ ಕಾರಂತರಿಗೆ ತಮ್ಮ ಬಾಳಿನ ಬೆಳಕೇ ದಾರಿದೀಪವಾಗಿತ್ತು. ತಮ್ಮ ಬುದ್ಧಿಯನ್ನು ಬಾಡಿಗೆ ಕೊಟ್ಟು ಗುರುವಿಗೆ ಗುಲಾಮನಾಗುವುದು ಕಾರಂತರಿಗೆ ಸಮ್ಮತವಾಗಿರಲಿಲ್ಲ.

ದೇವರ ಅಸ್ತಿತ್ವವನ್ನು ಅಲ್ಲಗಳೆಯುತ್ತಲೂ ಬದುಕಿಗೆ ನೈತಿಕ ತಳಹದಿಬೇಕೆಂದು ಸಾರಿದ ಕಾರಂತರು ಕಾರ್ಲ್-ಮಾರ್ಕ್ಸ್‌ನ ತತ್ವ ಮತ್ತು ಚಾರ್ವಾಕರ ಸಿದ್ಧಾಂತಗಳನ್ನು ತಿರಸ್ಕರಿಸಿದ್ದರು. ಹೆಣ್ಣಿನ ಶೋಷಣೆಯನ್ನು ಅತ್ಯಂತ ಶಕ್ತಿಶಾಲಿಯಾಗಿ ತಮ್ಮ ಕೃತಿಗಳಾದ 'ಮರಳಿ ಮಣ್ಣಿಗೆ' ಮತ್ತು ಸರಸಮ್ಮನ ಸಮಾಧಿಗಳಲ್ಲಿ ಗುರುತಿಸಿದ ಕಾರಂತರಿಗೆ ಸ್ವೇಚ್ಛಾಚಾರಿಯಾದ ಆಧುನಿಕ ಮಹಿಳೆಯರ ಬಗ್ಗೆ ಗೌರವವಿರಲಿಲ್ಲ.

ನವ್ಯ, ಬಂಡಾಯ, ಸ್ತ್ರೀವಾದ ಮುಂತಾದ ಯಾವುದೇ ಹಣೆಪಟ್ಟಿ ಕಟ್ಟಿಕೊಳ್ಳದೆಯೂ, ಅವರೆಲ್ಲರಂತೆ ಕಾರಂತರ ಮೂಲಭೂತ ಸ್ವಭಾವ ಅನ್ಯಾಯದ ವಿರುದ್ಧ ಹೋರಾಡುವುದೇ ಆಗಿತ್ತು. ಆದರೆ ಕೊಟ್ಟ ಸಂಬಳಕ್ಕೆ ಪ್ರಾಮಾಣಿಕವಾಗಿ ದುಡಿಯದ ಕೆಲಸಗಾರರ ವಿರುದ್ಧವೂ ಟೀಕಾಪ್ರಹಾರ ಮಾಡುವ ಕಾರಂತರನ್ನು, ಪಡೆದ ಸಾಲವನ್ನು ಮರಳಿ ಕೊಡುವ ಸಂಸ್ಕೃತಿಯನ್ನು ಮರೆತ ಜನರನ್ನು ಉಗ್ರವಾಗಿ ಟೀಕಿಸಿದ ಕಾರಂತರನ್ನು ಬಂಡವಾಳಶಾಹೀ ಮನೋವೃತ್ತಿಯ ವರೆನ್ನುವುದು ತಪ್ಪು. ಮನುಷ್ಯನ ಮೂಲಭೂತ ಸ್ವಾತಂತ್ರ್ಯಕ್ಕೆ ಧಕ್ಕೆಯಾಗದಂತೆ ಸಮಾಜದ ಮೂಲಭೂತ ಸ್ವಾತಂತ್ರ್ಯಕ್ಕೆ ಧಕ್ಕೆಯಾಗದಂತೆ ಸಮಾಜದ ಹಿತವನ್ನು ಸಾಧಿಸುವುದೇ ಕಾರಂತರ ಜೀವನ ದೃಷ್ಟಿಯ ಪ್ರಧಾನ ಅಂಶವಾಗಿತ್ತು.

95 ವರ್ಷಗಳ ತುಂಬು ಜೀವನವನ್ನು ಬಾಳಿದ ಈ ವ್ಯಕ್ತಿಯನ್ನು ಋಷಿ ಎಂದು ಕರೆದರೆ ಕಾರಂತರಿಗೇ ಒಪ್ಪಿಗೆ ಆಗಲಿಕ್ಕಿಲ್ಲ. ಆದರೆ ಜೀವನದುದ್ದಕ್ಕೂ ಆಹಾರ, ನಿದ್ರೆ, ವಿಹಾರಗಳಲ್ಲಿ ಅದ್ಭುತ ಸಂಯಮವನ್ನು ಪಾಲಿಸಿ, ಜಪ, ತಪ, ಯೋಗ ಈ ಯಾವ ಸಾಧನೆಗಳಿಲ್ಲದೆಯೂ ಅದ್ಭುತ ಏಕಾಗ್ರತೆಯಿಂದ ಕೃತಿ ರಚನೆ ಮಾಡಿದ ಕಾರಂತರದು ಋಷಿ ಸದೃಶ ಜೀವನವೇ. ಪುರೋಹಿತ ಶಾಹಿಯನ್ನು ವಿರೋಧಿಸಿದ ಕಾರಂತರಿಗೆ ನುಡಿದಂತೆ ನಡೆಯುವ ಪುರೋಹಿತರ ಬಗ್ಗೆ ಗೌರವವಿತ್ತು. ಜೀವನದುದ್ದಕ್ಕೂ ಆಶಾವಾದ, ಆದರ್ಶ, ಭಾವುಕತೆ ಗಳನ್ನೊಳಗೊಂಡ, ಮಾನವತಾವಾದಿ ಹಾಗು ವಿಚಾರವಾದಿಯಾದ ಈ ಮನುಷ್ಯ ನಮ್ಮ ಮಧ್ಯೆ ನಡೆದಾಡಿದ್ದರು ಎಂದು ನಂಬುವುದೇ ಕಠಿಣ.

ಕಾರಂತರು ಎಲ್ಲಿಯೂ ಯಾರಿಗೂ ಅನ್ಯಾಯವಾದಲ್ಲಿ ಅದನ್ನು ಪ್ರತಿಭಟಿಸುತ್ತಿದ್ದರು. ಅದಕ್ಕಾಗಿ ನ್ಯಾಯಾಲಯದ ಮೆಟ್ಟಿಲನ್ನು ಏರುತ್ತಿದ್ದರು. ಪರಿಸರ ರಕ್ಷಣೆಗಾಗಿ ಕೇವಲ ಭಾಷಣಗಳಲ್ಲಿ ಕಾಳಜಿ ವ್ಯಕ್ತಪಡಿಸದೆ, ಸುಪ್ರೀಂ ಕೋರ್ಟಿನ ಬಾಗಿಲುಗಳನ್ನು ತಮ್ಮ ಇಳಿವಯಸ್ಸಿನಲ್ಲೂ ತುಳಿದ ಈ ವ್ಯಕ್ತಿಯ ಜೀವನ ಸಂದೇಶ ಅತ್ಯಂತ ಸರಳ. ಸರ್ವಭೂತಗಳ ಹಿತವನ್ನು ಬಯಸುವ ಕಾರಂತರ ಸರ್ವೋದಯ ದೃಷ್ಟಿ ಕೇವಲ ಮಾನವರಿಗೆ ಸೀಮಿತವಾಗಿರಲಿಲ್ಲ. "ಸರ್ವಂಖಲ್ವಿದಂಬ್ರಹ್ಮಂ" ಎಂದು ಹೇಳದೆಯೂ ಜಗತ್ತಿನ ಕಡಲು, ಬೆಟ್ಟ, ನದಿ, ಪ್ರಾಣಿ, ಪಕ್ಷಿ ಎಲ್ಲವುಗಳನ್ನೂ ಪ್ರೀತಿಸುತ್ತಿದ್ದ ಕಾರಂತರು ಆಷಾಢಭೂತಿತನವನ್ನು ಮೆರೆಯುವ ಆಧ್ಯಾತ್ಮವಾದಿಗಳಿಂದಲೂ, ನವ್ಯರಿಂದಲೂ ಭಿನ್ನರಾಗಿದ್ದರು.

ವೇದ, ಉಪನಿಷತ್ತುಗಳ ಬಗ್ಗೆ ಯಾವ ಒಲವನ್ನು ತೋರಿಸದಿದ್ದರೂ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟ ಲೋಕ ಕಲ್ಯಾಣವನ್ನು ತನ್ನ ಬದುಕಿನ ಮೂಲ ಮಂತ್ರವನ್ನಾಗಿಟ್ಟುಕೊಂಡ ಈ ವಿಶ್ವಮಾನವ ಹೆಸರು ವಿಶ್ವವಿರುವ ತನಕ ಅಮರವಾಗಿರುವುದರಲ್ಲಿ ಸಂದೇಹವಿಲ್ಲ.

ಶ್ರೀ ಬಸವೇಶ್ವರಾ....
ಕಾರ್ತಿಕದ ಕತ್ತಲಲಿ ಆಕಾಶದೀಪವಾಗಿ ನೀ ಬಂದೆ
ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ
ಎಂಟು ಶತಮಾನಗಳ ಹಿಂದೆ
ಅಗ್ನಿಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ
ದೇವದಯೆಯೊಂದು ಹೇ ಧೀರಾವತಾರ
ಶ್ರೀ ಬಸವೇಶ್ವರಾ.....

**– ರಾಷ್ಟ್ರಕವಿ ಕುವೆಂಪು**

ಬಾರಿಸು ಕನ್ನಡ ಡಿಂಡಿಮವ
ಓ ಕರ್ನಾಟಕ ಹೃದಯಶಿವ

**– ರಾಷ್ಟ್ರಕವಿ ಕುವೆಂಪು**

ಕನ್ನಡ, ಕನ್ನಡ, ಬರ್‍ರಿ ನಮ್ಮ ಸಂಗಡ

**– ಚಂಪಾ**

# ಬದುಕಿನ ಅಂಗಣದಲ್ಲಿ ನುಡಿದಂತೆ ನಡೆದವರು ಸ್ವಾಮಿ ಜಗದಾತ್ಮಾನಂದಜೀ

**– ಬಿ.ವಿ. ಕೆದಿಲಾಯ**

ಇತ್ತೀಚೆಗೆ ಬ್ರಹ್ಮೈಕ್ಯರಾದ ಪರಮಪೂಜ್ಯ ಸ್ವಾಮಿ ಜಗದಾತ್ಮಾನಂದಜೀ ಅವರು ಪೂರ್ವಾಶ್ರಮದಲ್ಲಿ ನನ್ನ ಖಾಸಾ ಅಣ್ಣ. ಅಷ್ಟೇ ಅಲ್ಲ, ನನ್ನ ಬದುಕನ್ನು ರೂಪಿಸಿ, ಬೆಳೆಸಿ, ಬೆಳಗಿಸಿದ ಮಹಾನುಭಾವರಾಗಿದ್ದರು. ಅವರಿಂದ ನಾನು ಪಡೆದದ್ದು ಅಪಾರ, ಅಗಾಧ, ಅನನ್ಯ, ಅದನ್ನು ಯಾವ ಮಾಧ್ಯಮದಿಂದಲೂ ಬಣ್ಣಿಸಲು ಸಾಧ್ಯವಿಲ್ಲ. ಕಡುಬಡತನದ ಬಾಲ್ಯ ಜೀವನದ ಸಂಕಷ್ಟಗಳನ್ನು ಮೆಟ್ಟಿ ನಿಂತು, ಜೀವನದಲ್ಲಿ ತಾನು ಆರಿಸಿಕೊಂಡ ಆದರ್ಶಪಥದಲ್ಲಿ ಸಾಗಿ, ಅತ್ಯುನ್ನತಿಯಲ್ಲಿ ಸಾಧಿಸಿದ್ದಲ್ಲದೆ, ಲಕ್ಷಾಂತರ ಜನರ ಬದುಕಿನ ಮೇಲೆ ಪ್ರಭಾವ ಬೀರಿದ ಆ ಮಹಾನ್ ಚೇತನವನ್ನು ಮರೆಯುವದಂತೂ ಸಾಧ್ಯವೇ ಇಲ್ಲ. ಸ್ವಾಮಿ ವಿವೇಕಾನಂದರು ಜಗತ್ತಿಗೆ ನೀಡಿದ 'ಆತ್ಮನೋ ಮೋಕ್ಷಂ ಜಗತ್ ಹಿತಾಯಚ' ಎಂಬ ಸಾರ್ವಕಾಲಿಕ ಧ್ಯೇಯವನ್ನು ಜೀವನದಲ್ಲಿ ಸಂಪೂರ್ಣವಾಗಿ ಸಾಧಿಸಿದ ಮಹಾತ್ಮರವರು. ಇದು ಅಭಿಮಾನದ ಅತಿಶಯೋಕ್ತಿಯಲ್ಲ, ಸತ್ಯಸ್ಯ ಸತ್ಯ.

**ಕೌಟುಂಬಿಕ ಹಿನ್ನೆಲೆ**

ನಮ್ಮ ಹುಟ್ಟೂರು ಉಡುಪಿ ತಾಲೂಕಿನ ಬಾಳೆಕುದ್ರು ಗ್ರಾಮ. ಅದು ಸುಮಾರು 90 ವರ್ಷಗಳ ಹಿಂದಿನ ಕಾಲ. ತಂದೆ ಶ್ರೀನಿವಾಸ ಕೆದಿಲಾಯರು ಸಂಸ್ಕೃತದಲ್ಲಿ ಘನ ವಿದ್ವಾಂಸರಾಗಿದ್ದರೂ, ಆರ್ಥಿಕ ದಾರಿದ್ರ್ಯ ತಪ್ಪಿರಲಿಲ್ಲ. ಕೇವಲ ಒಂದೂವರೆ ಎಕರೆ ಜಮೀನು ಮತ್ತು ಪೌರೋಹಿತ್ಯದಿಂದ ಬರುತ್ತಿದ್ದ ಅಲ್ಪಸ್ವಲ್ಪ ಆದಾಯ – ಇಷ್ಟರಿಂದಲೇ ಪತ್ನಿ, ತಾಯಿ, ಆರು ಮಕ್ಕಳ ಕುಟುಂಬ ಸಾಗಬೇಕಾಗಿತ್ತು. ಆರು ಮಕ್ಕಳ ಪೈಕಿ ಮೂವರು ಸೋದರಿಯರು (ಪದ್ಮಾ, ಗಿರಿಜಾ, ಸರೋಜಾ), ಅಣ್ಣ (ಲಕ್ಷ್ಮೀನಾರಾಯಣ – ಮುಂದೆ ಜಗದಾತ್ಮಾನಂದಜೀ), ನಾನು (ವೆಂಕಟಕೃಷ್ಣ), ರಘುಪತಿ ತಮ್ಮಂದಿರು. ಅಣ್ಣನವರು ತಂದೆಯವರ ಕಠೋರ ಶಿಸ್ತಿನಲ್ಲಿ ಬೆಳೆದರು. ಸ್ಥಳೀಯ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲಿ ಓದಿದರು. ಅವರ 15ನೇ ವಯಸ್ಸಿನಲ್ಲಿದ್ದಾಗ ತಾಯಿ (ಶ್ರೀದೇವಿ) ಹಠಾತ್ತನೆ ತೀರಿಕೊಂಡರು. ಇದರಿಮದ ಕುಟುಂಬಕ್ಕೆ ಭಾರೀ ಆಘಾತವಾಯಿತು. ತಂದೆಯವರು ಮರುಮದುವೆಯಾಗಲು ನಿರಾಕರಿಸಿದರು. ಹಿರಿಯಕ್ಕನಿಗೆ ಮದುವೆಯಾಗಿತ್ತು. ಉಳಿದ ಐವರು ಮಕ್ಕಳನ್ನೂ, ಅನಾರೋಗ್ಯ

ಪೀಡಿತೆ ವೃದ್ಧ ತಾಯಿಯನ್ನೂ ನೋಡಿಕೊಳ್ಳಬೇಕಾದ ಜವಾಬ್ದಾರಿಯನ್ನು ತಂದೆ ಹೇಗೋ ಕೆಲ ವರ್ಷ ನಿಭಾಯಿಸಿದರು. ಅಣ್ಣ ಶಿಕ್ಷಕ ತರಬೇತಿ ಮುಗಿಸಿ ಹುಟ್ಟೂರಿನ ಶಾಲೆಯಲ್ಲೇ ಶಿಕ್ಷಕನಾಗಿ ಸೇರಿದಾಗ ಒಂದಿಷ್ಟು ಸಮಾಧಾನದ ನಿಟ್ಟುಸಿರು. ಇನ್ನು ಅಣ್ಣ ಮದುವೆಯಾಗಿ ಬಿಟ್ಟರೆ ಸಂಸಾರ ಪುನಃ ಹಳಿಗೆ ಬರುತ್ತದೆ ಎಂಬುದು ಎಲ್ಲರ ನಿರೀಕ್ಷೆಯಾಗಿತ್ತು. ಆದರೆ ಅಣ್ಣನವರಿಗೆ ಮದುವೆ ಇಷ್ಟವಿರಲಿಲ್ಲ. – 'ನನಗೆ ಸಂಸಾರ ಬೇಡ, ಸನ್ಯಾಸವೇ ಆಗಬೇಕು, ನಾನು ರಾಮಕೃಷ್ಣಾಶ್ರಮ ಸೇರುತ್ತೇನೆ' ಎಂದು ತಮ್ಮ ನಿರ್ಧಾರ ಘೋಷಿಸಿಯೇ ಬಿಟ್ಟರು. ತಂದೆ ಹಾಗಾದರೆ ತನ್ನ ಮತ್ತು ಮಕ್ಕಳ ಗತಿಯೇನು ಎಂದು ಚಿಂತಿಸತೊಡಗಿದರು. ಇದನ್ನರಿತ ಅಣ್ಣ – 'ಚಿಂತಿಸಬೇಡಿ, ತಮ್ಮನ ವಿದ್ಯಾಭ್ಯಾಸ ಮುಗಿದು ಉದ್ಯೋಗ ಸಿಗುವವರೆಗೆ ನಾನು ನಿಮ್ಮನ್ನು ಬಿಟ್ಟು ಹೋಗುವುದಿಲ್ಲ' ಎಂದು ನುಡಿದರು. ನುಡಿದಂತೆಯೇ ನಡೆದರು. ನನ್ನನ್ನು ಕೋಟದಲ್ಲಿದ್ದ ಹೈಸ್ಕೂಲಿಗೆ, ಅನಂತರ ಸಾಲಸೋಲ ಮಾಡಿ ಉಡುಪಿಯಲ್ಲಿದ್ದ ಎಂ.ಜಿ.ಎಂ. ಕಾಲೇಜಿಗೆ ಸೇರಿಸಿದರು. ಆಗ ನನಗೆ ಪೇಜಾವರ ಮಠದಲ್ಲಿ ವಾಸ, ಕೃಷ್ಣ ಮಠದ ಭೋಜನ ಶಾಲೆಯಲ್ಲಿ ಊಟ, ಅಲ್ಲಿಂದ ಮೂರು ಮೈಲು ದೂರದ ಕಾಲೇಜಿಗೆ ಬರಿಗಾಲಿನಲ್ಲಿ ಓಟ. ಹೀಗೆ ಎರಡು ವರ್ಷ ಕಳೆದ ಮೇಲೆ ಎಲ್‌ಐಸಿಯಲ್ಲಿ ಉದ್ಯೋಗ ಸಿಕ್ಕಿತು.

ಆಗ ಅಣ್ಣ ಹೇಳಿದರು – 'ಇನ್ನು ಮುಂದೆ ಸಂಸಾರದ ಜಬಾಬ್ದಾರಿ ನಿನ್ನದು. ನಾನು ಸನ್ಯಾಸದ ದಾರಿ ಹಿಡಿಯುತ್ತೇನೆ!'. ತಂದೆಯವರಿಗೆ ಹೇಳಿದರು : 'ನೀವು ನನಗಿನ್ನು ಅಪ್ಪಣೆ ನೀಡಬೇಕು! ಆಶೀರ್ವಾದ ಮಾಡಬೇಕು', ತಂದೆ ಒಪ್ಪಿದರು – 'ನಿನ್ನ ದಾರಿಯಲ್ಲಿ ವಿಚಲಿತನಾಗದೆ ಗುರಿ ತಲುಪುವಂತಾಗಲಿ' ಎಂದು ಆಶೀರ್ವದಿಸಿದರು. ಅಣ್ಣ ರಾಮಕೃಷ್ಣಾಶ್ರಮದ ಕಡೆ ನಡೆದರು. ದಡ ಸೇರಿದರು. ಮಂಗಳೂರು, ಮೈಸೂರು, ಬೆಂಗಳೂರು ರಾಮಕೃಷ್ಣಮಠದಲ್ಲಿ ಸಾಧನೆ, ಸೇವೆ, ಅಧ್ಯಯನ, ಅಧ್ಯಾಪನ, ಪ್ರವಚನ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ, ಮುಂತಾದ ಚಟುವಟಿಕೆಗಳಲ್ಲಿ ಲೀನರಾದರು. ಸಾರ್ಥಕತೆಯನ್ನೂ, ಧನ್ಯತೆಯನ್ನೂ ಕಂಡುಕೊಂಡರು. ಸಕಾಲದಲ್ಲಿ ಸನ್ಯಾಸ ದೀಕ್ಷೆ ಸ್ವೀಕರಿಸಿ, 'ಸ್ವಾಮಿ ಜಗದಾತ್ಮಾನಂದ'ರಾದರು. ಆಧ್ಯಾತ್ಮಿಕ ಸಾಧಕರಾಗಿ, ಬೋಧಕರಾಗಿ ಪ್ರಸಿದ್ಧಿ, ಜನಪ್ರಿಯತೆಯನ್ನೂ ಗಳಿಸಿದರು.

**ಡಾಕ್ಟರ್ ಸ್ವಾಮೀಜಿ**

ಮೈಸೂರಿನ ರಾಮಕೃಷ್ಣ ವಿದ್ಯಾಲಯದ ಆಡಳಿತ ನಿರ್ವಾಹಕರಾಗಿ ಅವರು ವಿದ್ಯಾರ್ಥಿಗಳಿಗೆ ನೀಡಿದ ಮಾರ್ಗದರ್ಶನ, ಪ್ರೀತಿ ಅನನ್ಯವಾಗಿತ್ತು. ಇಂದು

ಪ್ರೌಢರಾಗಿ ದೊಡ್ಡ ದೊಡ್ಡ ಹುದ್ದೆಯಲ್ಲಿದ್ದರೂ ಅನೇಕರು ಅವನ್ನು ನೆನಪಿಸಿಕೊಳ್ಳುತ್ತಾರೆ. ಅವರ ಬೌದ್ಧಿಕ ಔನತ್ಯ, ಬಹುಶ್ರುತ ಪಾಂಡಿತ್ಯ, ಸತ್ವಪೂರ್ಣವೂ, ಸ್ವಾರಸ್ಯಕರವೂ ಆದ ವಾಗ್ಮಿತ್ವ, ಆಧ್ಯಾತ್ಮವಲ್ಲದೆ ಸಾಹಿತ್ಯ, ಸಂಗೀತಪ್ರೇಮ ಮತ್ತು ನವಿರಾದ ಹಾಸ್ಯಪ್ರಜ್ಞೆ, ಎಲ್ಲರಿಗೂ ಒಳಿತಾಗಬೇಕೆಂಬ ಪ್ರಾಮಾಣಿಕ ಕಳಕಳಿ ಮುಂತಾದ ಗುಣಗಳು ಅವರ ಸಂಪರ್ಕಕ್ಕೆ ಬಂದ ಪ್ರತಿಯೊಬ್ಬರನ್ನೂ ಮಂತ್ರಮುಗ್ಧರಾಗಿಸುತ್ತಿತ್ತು. ವಿದ್ಯಾಲಯದ ಒಂದು ಕೊಠಡಿಯಲ್ಲಿ ಒಂದು ಪುಟ್ಟ ತುರ್ತು ಚಿಕಿತ್ಸಾ ಘಟಕವಿತ್ತು. ವಿದ್ಯಾರ್ಥಿಗಳಿಗೆ ಬರುವ ಸಣ್ಣಪುಟ್ಟ ಕಾಯಿಲೆಗಳಿಗೆ ಅಲ್ಲಿ ಚಿಕಿತ್ಸೆ ದೊರೆಯುತ್ತಿತ್ತು. ಜಗದಾತ್ಮಾನಂದಜೀ ಅದರ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರು. ಹೀಗಾಗಿ ಅವರನ್ನು ವಿದ್ಯಾರ್ಥಿಗಳೆಲ್ಲ 'ಡಾಕ್ಟರ್ ಸ್ವಾಮೀಜೀ' ಎಂದೇ ಕರೆಯುತ್ತಿದ್ದರು. ಅವರ ಚಿಕಿತ್ಸೆಯಲ್ಲಿ ಔಷಧದ ಜತೆಗೆ ಪ್ರೀತಿ, ಕಾಳಜಿ ತುಂಬಿರುತ್ತಿತ್ತು. ಅಲ್ಲದೆ, ಅವರಲ್ಲಿ ಸಾಕಷ್ಟು ಸಂಗೀತಜ್ಞಾನವೂ ಇತ್ತು. ಅಲ್ಲದೆ, ಸಂಗೀತಜ್ಞಾನ ಇದ್ದುದರಿಂದ ಭಜನೆಗಳನ್ನು ಸುಶ್ರಾವ್ಯವಾಗಿ ಹಾರ್ಮೋನಿಯಂ ನುಡಿಸುತ್ತಾ ಹಾಡುತ್ತಿದ್ದರು. ಪ್ರತಿರಾತ್ರಿ ವಿದ್ಯಾರ್ಥಿಗಳ ರೂಮಿನ ಇಂಟರ್‌ಕಾಮ್‌ಗೆ ಫೋನ್ ಮಾಡಿ ಕಥೆಗಳನ್ನು ಹೇಳುತ್ತಿದ್ದರು. ಅವರ ಕಥೆಗಳಲ್ಲಿ ಜಿಮ್ ಕಾರ್ಬೆಟ್, ಕೆನೆಟ್ ಆಂಡರ್‌ಸನ್‌ರ ನರಭಕ್ಷಕ ಹುಲಿ ಚಿರತೆಗಳ ಕಥೆಗಳು, ಭೂತ, ಪುನರ್ಜನ್ಮಗಳ ಕಥೆಗಳೂ ವೈಜ್ಞಾನಿಕ ಕಥೆಗಳೂ ಇರುತ್ತಿದ್ದವು. ಅವೂ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಪೂರಕವಾಗಿದ್ದವು ಎಂದು ಅಲ್ಲಿ ವಿದ್ಯಾರ್ಥಿ ಯಾಗಿದ್ದವರೊಬ್ಬರು ಬರೆದಿದ್ದಾರೆ.

## ದೇಶ-ವಿದೇಶಗಳಲ್ಲಿ

ಸ್ವಾಮೀಜಿಯವರ ಪ್ರವಚನ ಕೌಶಲ ಮತ್ತು ಸೃಜ ಮಾನವೀಯ ಕಾಳಜಿ, ಅನ್ಯರಲ್ಲಿರುವ ಒಳಿತನ್ನು ಮೆಚ್ಚುವ ಗುಣ, ಆಡುವ ಮಾತುಗಳಲ್ಲಿದ್ದ ಪ್ರಾಮಾಣಿಕ ಶ್ರದ್ಧೆ ಮುಂತಾದ ಗುಣಗಳಿಂದ ವಿದ್ಯಾರ್ಥಿಗಳು, ಶಿಕ್ಷಕರು, ವೈದ್ಯರು, ವೃತ್ತಿಪರರು, ಸಾಹಿತಿಗಳು, ಕಲಾವಿದರು, ಅಧಿಕಾರಿಗಳು ಮುಂತಾದ ಸಮಾಜದ ಎಲ್ಲಾ ಸ್ತರದ ಜನರ ಹೃನ್ಮನಗಳಿಗೆ ಹತ್ತಿರವಾದರು. ಅವರ ಆಧ್ಯಾತ್ಮಿಕ ಸಾಧನೆ, ವಿದ್ವತ್ತು, ಸಂವಹನ ಕೌಶಲಗಳನ್ನು ಗುರುತಿಸಿ ಕೋಲ್ಕತ್ತಾದಲ್ಲಿರುವ ರಾಮಕೃಷ್ಣ ಮಿಷನ್ನಿನ ಕೇಂದ್ರ, ಬೇಲೂರು ಮಠದಲ್ಲಿ ಬ್ರಹ್ಮಚಾರಿ, ಸನ್ಯಾಸಿಗಳ ತರಬೇತಿ ವಿದ್ಯಾಲಯಕ್ಕೆ ಪ್ರಾಂಶುಪಾಲರಾಗಿ ನಿಯುಕ್ತರಾದರು. ಅಲ್ಲಿ ಸುಮಾರು 12 ವರ್ಷ ಕಾಲ ಸಮರ್ಥವಾಗಿ ಸೇವೆ ಸಲ್ಲಿಸಿದರು. ಬಂಗಾಲಿ ಭಾಷೆಯನ್ನೂ ಕಲಿತರು. ಅನಂತರ ಅವರನ್ನು ಮಿಷನ್ನಿನ ಸಿಂಗಾಪುರ ಶಾಖೆಯ ಅಧ್ಯಕ್ಷರನ್ನಾಗಿ ನೇಮಿಸಲಾಯಿತು.

ಅಲ್ಲಿ ಕೆಲ ವರ್ಷ ಸೇವೆ ಸಲ್ಲಿಸಿ, ನ್ಯೂಜಿಲ್ಯಾಂಡ್, ಮೈನ್‌ಮಾರ್ ದೇಶಗಳಲ್ಲಿಯೂ ಅನೇಕ ಪ್ರವಚನಗಳನ್ನು ನೀಡಿದರು. ಅಲ್ಲದೇ ಅನೇಕ ವಿಶ್ವವಿದ್ಯಾಲಯಗಳಲ್ಲೂ, ಪ್ರತಿಷ್ಠಿತ ಸಂಸ್ಥೆಗಳಲ್ಲೂ ಆಹ್ವಾನಿತರಾಗಿ ದಿಕ್ಸೂಚಿ ಭಾಷಣಗಳನ್ನು ಮಾಡಿದರು. ಕಾರಣ ಅವರ ಆಳವೂ, ವಿಸ್ತಾರವೂ, ವ್ಯಾಪಕವೂ ಆಗಿದ್ದ ವಿದ್ವತ್ತು, ಆಧ್ಯಾತ್ಮಿಕ ಸಾಧನೆಯ ಹಿನ್ನೆಲೆ ಮತ್ತು ವಿಶಿಷ್ಟ ಸಂವಹನ ಕೌಶಲ, ವೇದ, ಉಪನಿಷತ್ತು, ಭಗವದ್ಗೀತೆ, ರಾಮಕೃಷ್ಣ–ವಿವೇಕಾನಂದರ ಸಾಹಿತ್ಯಗಳಲ್ಲದೆ ಪಾಶ್ಚಾತ್ಯ ಲೋಕದ ಧೀಮಂತರ ವಿಚಾರಗಳನ್ನೂ ಅಧ್ಯಯನ ಮಾಡಿದ್ದರು. ಐನ್‌ಸ್ಟೈನ್, ಹೈಸೆನ್ ಬರ್ಗ್, ರಸೆಲ್, ಹಕ್ಸಲಿ, ಎಡ್ವರ್ಡ್ ಕೇಸಿ, ವಿಲಿಯಮ್ ಜೇಮ್ಸ್, ಸೊರೊಕಿನ್ ಮುಂತಾದವರ ವಿಚಾರಗಳನ್ನು ತಿಳಿದುಕೊಂಡಿದ್ದರಲ್ಲದೇ ಸಾಂದರ್ಭಿಕವಾಗಿ ಅವರ ವಾಕ್ಯಗಳನ್ನು ಉದ್ಧರಿಸಿ ಹೇಳುತ್ತಿದ್ದರು. ಭಾರತೀಯ ವೇದಾಂತ ಪರಂಪರೆಯೊಂದಿಗೆ ಪಾಶ್ಚಾತ್ಯ ವೈಜ್ಞಾನಿಕ ಮತ್ತು ಮನಶಾಸ್ತ್ರೀಯ ಚಿಂತನೆಗಳ ಉತ್ತಮಾಂಶಗಳನ್ನು ಜೀರ್ಣಿಸಿಕೊಂಡಿದ್ದರು. ನಮ್ಮ ದೇಶದ ಕೆಲವು ಬುದ್ಧಿಜೀವಿಗಳು ನಮ್ಮ ಸಂಸ್ಕೃತಿ, ಪರಂಪರೆಯನ್ನು ಸರಿಯಾಗಿ, ಸಮಗ್ರ ದೃಷ್ಟಿಯಿಂದ ತಿಳಿದುಕೊಳ್ಳದೆ ಸಂಸ್ಕೃತಿ ವಿರೋಧಿ ಚಿಂತನೆಗಳನ್ನು ಹರಡುತ್ತಿರುವುದರ ಬಗ್ಗೆ ಅವರಿಗೆ ಅಸಮಾಧಾನವಿತ್ತು. ಆದರೂ ಸದ್ಭಾವನೆ, ಸಕಾರಾತ್ಮಕ ವಿಚಾರಗಳನ್ನೇ ಜನಮನದಲ್ಲಿ ಬಿತ್ತಬೇಕೆಂಬ ಆದರ್ಶದಂತೆ ನಡೆದರು. ವೈಯಕ್ತಿಕ ಪ್ರಚಾರ, ವೈಭವೀಕರಣವನ್ನ ದೃಢವಾಗಿ ನಿರಾಕರಿಸಿದರು. ಕೆಲ ವರ್ಷಗಳ ಹಿಂದೆ ಕಾಂತಾವರ ಕನ್ನಡ ಸಂಘದ ಡಾ. ಮೊಗಸಾಲೆ ಅವರು ಇವರ ಕುರಿತು ಒಂದು ಪುಸ್ತಕವನ್ನು ಪ್ರಕಟಿಸಲು ಮುಂದೆ ಬಂದಾಗ ಇವರು ಅದಕ್ಕೆ ಸಮ್ಮತಿ ನೀಡಲಿಲ್ಲ. ವಿದೇಶದಿಂದ ಹಿಂದಿರುಗಿದ ಬಳಿಕ ಪೊನ್ನಂಪೇಟೆ ಆಶ್ರಮದ ಅಧ್ಯಕ್ಷರಾದರು. ಆಗ ಹಳೆಯ ಪುಟ್ಟ ಹೆಂಚಿನಮನೆಯಾಗಿದ್ದ ರಾಮಕೃಷ್ಣ ದೇಗುಲವನ್ನು ಜೀರ್ಣೋದ್ಧರ ಮಾಡಿ, ಭವ್ಯ ದೇಗುಲವಾಗಿ ಪರಿವರ್ತಿಸಿದರು.

**'ಬದುಕಲು ಕಲಿಯಿರಿ' ಪವಾಡ**

ಸ್ವಾಮಿ ಜಗದಾತ್ಮಾನಂದಜೀ ಅವರ ಹೆಸರು ಚಿರಸ್ಥಾಯಿಯಾಗಿ ಮಾಡಿರುವುದು ಅವರು ಬರೆದ ಶ್ರೇಷ್ಠ ಗ್ರಂಥ – 'ಬದುಕಲು ಕಲಿಯಿರಿ', 'ವ್ಯಕ್ತಿತ್ವ ವಿಕಸನ' (Personality Development) ಎಂಬ ವಸ್ತುವಿನ ಮೇಲೆ ಬರೆದ ಮೇರು ಕೃತಿ. ಈಚಿನ ವರ್ಷಗಳಲ್ಲಿ ಈ ವಸ್ತುವಿನ ಕುರಿತು ನೂರಾರು ಪುಸ್ತಕಗಳು ಇಂಗ್ಲೀಷಿನಲ್ಲಿ, ಕನ್ನಡದಲ್ಲಿ ಪ್ರಕಟವಾಗಿವೆ, ಇನ್ನೂ ಆಗುತ್ತಿವೆ. ಸುಮಾರು 60–70 ವರ್ಷಗಳ ಹಿಂದೆ ಈ ಬಗ್ಗೆ ಅಮೇರಿಕನ್ ಲೇಖಕ ಡೇಲ್ ಕಾರ್ನೆಗಿ ಅವರ

ಪುಸ್ತಕಗಳು ತುಂಬಾ ಜನಪ್ರಿಯವಾಗಿದ್ದವು. ಅದನ್ನು ಸ್ವಾಮೀಜಿ ಮೆಚ್ಚಿಕೊಂಡಿದ್ದರು. ಆದರೆ ಅದರಲ್ಲಿ ವ್ಯಕ್ತವಾಗಿದ್ದ ತತ್ತ್ವಗಳು ಉತ್ತಮವಾಗಿದ್ದರೂ, ಭಾರತೀಯ ಚಿಂತನೆಗಳ ಉತ್ತಮಾಂಶಗಳನ್ನು ಅಳವಡಿಸದಿದ್ದರೆ ವ್ಯಕ್ತಿತ್ವ ವಿಕಸನ ಪರಿಪೂರ್ಣವಾಗಲಾರದೆಂದು ಅವರಿಗೆ ಅನಿಸಿತ್ತು. ಹಾಗಾಗಿ ತನ್ನ ದೇಶದ ವಿಚಾರ, ಚಿಂತನೆ, ಅನುಭವ, ಭಾರತೀಯ ಸಾಂಸ್ಕೃತಿಕ, ಆಧ್ಯಾತ್ಮಿಕ ಪರಂಪರೆಯ ಮೌಲ್ಯಗಳನ್ನೂ ಸಮನ್ವಯಗೊಳಿಸಿ, 'ಬದುಕಲು ಕಲಿಯಿರಿ' ಗ್ರಂಥವನ್ನು ರಚಿಸಿದರು. ಅದೆಷ್ಟು ಜನಪ್ರಿಯವಾಯಿತೆಂದರೆ ಕನ್ನಡದಲ್ಲೇ 27 ಬಾರಿ ಪುನರ್ ಮುದ್ರಣ ಕಂಡು ದಾಖಲೆ ಸೃಷ್ಟಿಸಿತು. ತಮಿಳು, ತೆಲುಗು, ಮರಾಠಿ, ಹಿಂದಿ, ಇಂಗ್ಲೀಷ್ ಮುಂತಾದ 10 ಭಾಷೆಗಳಲ್ಲಿ ಅನುವಾದಗೊಂಡಿತು. ಖ್ಯಾತ ಲೇಖಕ ಪ್ರೊ. ಕು.ಶಿ. ಹರಿದಾಸ ಭಟ್ಟರು ಅದನ್ನು 'ಹೊಸ ಕಾಲದ ಕನ್ನಡ ಉಪನಿಷತ್ತು' ಎಂದು ಪ್ರಶಂಸಿಸಿದರು. ನಿರುತ್ಸಾಹ, ನಿರಾಶೆ, ಖಿನ್ನತೆಗಳಿಗೊಳಗಾದ ಸಾವಿರಾರು ಯುವ ಜನರೂ, ವಿದ್ಯಾರ್ಥಿಗಳೂ, ಸಾಮಾನ್ಯ ಜನರು ಅದನ್ನೋದಿ ತಮ್ಮ ಬದುಕಿನಲ್ಲಿ ಉತ್ಸಾಹ, ಧೈರ್ಯ, ಸ್ಥೈರ್ಯಗಳನ್ನು ಪಡೆದುಕೊಂಡಿದ್ದಾರೆ. ಎರಡು ವರ್ಷಗಳ ಹಿಂದೆ ಬೆಂಗಳೂರಿನ ಕೇಂದ್ರದಲ್ಲಿರುವ ಜ್ಞಾನಜ್ಯೋತಿ ಸಭಾಂಗಣದಲ್ಲಿ ಈ ಪುಸ್ತಕ ಚಿನ್ನದ ಹಬ್ಬವು 'ಬದುಕಲು ಕಲಿಯಿರಿ ಉತ್ಸವ'ವಾಗಿ ಇಡೀ ಒಂದು ದಿನ ಅದ್ದೂರಿಯಾಗಿ ನಡೆಯಿತು. ಅದನ್ನು ಆಯೋಜಿಸಿದವರು ಆ ಪುಸ್ತಕದಿಂದ ಸ್ಫೂರ್ತಿ ಪಡೆದು ಜೀವನದಲ್ಲಿ ಯಶಸ್ವಿಯಾದ ಶಿಷ್ಯರು. ಒಂದು ಪುಸ್ತಕವಾಗಿ ಇಂಥ ಉತ್ಸವವನ್ನು ಏರ್ಪಡಿಸಿದ ನಿದರ್ಶನ ಬಹುಶಃ ಕನ್ನಡದಲ್ಲಿ ಬೇರೆ ಇಲ್ಲ. ಇತ್ತೀಚೆಗೆ ಬೆಂಗಳೂರಿನ ಪುಸ್ತಕ ಪ್ರಕಾಶಕ–ಮಾರಾಟಗಾರರೊಬ್ಬರು ಹೀಗೆ ಹೇಳಿದರು – 'ಕನ್ನಡದಲ್ಲಿ ಈಚಿನ ವರ್ಷಗಳಲ್ಲಿ ಈ ವಿಷಯದ ಕುರಿತು ಸುಮಾರು ನೂರಾರು ಪುಸ್ತಕಗಳು ಪ್ರಕಟವಾಗಿವೆ. ಆದರೆ, 'ಬದುಕಲು ಕಲಿಯಿರಿ' ಈಗಲೂ ಅಗ್ರಸ್ಥಾನದಲ್ಲಿದೆ". ಹೀಗಾಗಿ 'ಬದುಕಲು ಕಲಿಯಿರಿ' ಒಂದು ಪವಾಡವೆಂದರೂ ತಪ್ಪಾಗದು.

ಸ್ವಾಮಿ ಜಗದಾತ್ಮಾನಂದಜೀ ಅವರ ಭೌತಿಕ ಶರೀರ ಇನ್ನಿಲ್ಲ. ಆದರೆ ಅವರ ಜೀವನದ ಆದರ್ಶ, ಅವರ ಕೃತಿ ಅಜರಾಮರ.

**ಸಾಧನೆ ಇಲ್ಲದೆ ಸತ್ತರೆ**
**ಸಾವಿಗೆ ಅವಮಾನ**
**ಆದರ್ಶ ಇಲ್ಲದೆ**
**ಬದುಕಿದರೆ**
**ಬದುಕಿಗೆ ಅವಮಾನ** .................

ಕವನ

# ಗಾಂಧಿ ಜಯಂತಿ

– ಪಾ. ಚಂ. ಚಡಗ

ಇಂದು ಗಾಂಧಿ ಜಯಂತಿ
ಮಕ್ಕಳಿಗೂ, ಮುದುಕರಿಗೂ
ಬಹಳ ಖುಷಿ
ಈತ, ಯಾರೀತ?
ಯಾವನೋ ಋಷಿ
ಅಥವಾ ಮೇನಕೆಯ
ತಪ್ಪಿದರೆ ಇಂದಿರೆಯ
ಅಲ್ಲದಿದ್ದರೆ ರಾಜೀವರ
ರಕ್ತ ಸಂಬಂಧಿ ಇರಬಹುದೇ?
ಇದ್ದರೂ ಇರಬಹುದು
ಗಾಂಧಿಯನು ಕೊಂದರಂತೆ
ಅಹುದೇ? ಪಾಪ
ಕೊಂದವರು ಯಾರು?
ಬ್ರಿಟಿಷರೋ, ಭಾರತೀಯರೋ?
ನಾನಂತೂ ಅಲ್ಲ ಸ್ವಾಮಿ,
ನಾನು ಅಲ್ಲವೇ ಅಲ್ಲ ಸ್ವಾಮೀ
ಏಕೆಂದರೆ ನಾನಾಗ
ಹುಟ್ಟಿರಲೇ ಇಲ್ಲ ಸ್ವಾಮೀ,
ಶಿವನ ಧನುಸ್ಸನ್ನು
ಮುರಿದವರು ಯಾರು?
ವಿದ್ಯಾರ್ಥಿಗಳೋ?
ಅಧ್ಯಾಪಕರೋ?
ಶಾಲಾ ಇನ್‌ಸ್ಪೆಕ್ಟರೋ?
ಯಾರಿಗೆ ಗೊತ್ತು?
ಈ ಗಾಂಧಿ ಜಯಂತಿಯಂದು
ಹೂಗಳ ಬೆಲೆ ದುಪ್ಪಟ್ಟು
ಖಾದಿ ಟೋಪಿಗೂ ಜುಬ್ಬಕ್ಕೂ
ಒಳ್ಳೇ ಡಿಮಾಂಡು ನೋಡಿ
ದಿಲ್ಲಿಯಲ್ಲಿ ಎಲ್ಲಾ
ರಸ್ತೆಗಳಿಂದು
ರಾಜಘಾಟದ ಕಡೆಗೆ
ಕಡೆಗೊಂದು
ಗಾಂಧೀಜೀಕಿ ಜೈ
ಅಟ್ಟದಲಿ ಬಿದ್ದು
ಧೂಳು ಮುತ್ತಿದ್ದ
ಗಾಂಧೀಜಿಯ
ಭಾವಚಿತ್ರಕ್ಕಿಂದು ಮುಕ್ತಿ,
ಈ ಗಾಂಧೀಜಿ
ಅಂದದ್ದಾರು ಏನು ಸ್ವಾಮೀ?
ಸರ್ವೇ ಜನಾಃ ಸುಖಿನೋ ಭವಂತು
ಬಡವರೂ ಬಲ್ಲಿದರೂ
ಹಣ ಇದ್ದವರೂ, ಇಲ್ಲದವರೂ
ಎಲ್ಲರೊಟ್ಟಾಗಿ
ಕಟ್ಟುವೆವು ನಾಡು
ನಾವಾದರೂ ಇಂದು
ಮಾಡುವೆವು ಏನು?
ವರ್ಗ ಸಂಘರ್ಷ
ವಿಪರೀತ ವೈರ
ವರ್ಗದ್ವೇಷದ ಜ್ವಾಲೆ
ವರ್ಣದ್ವೇಷದ ಶಾಲೆ
ಎಲ್ಲೆಲ್ಲೂ ತಲೆ ಎತ್ತಿವೆ
ನಾಯಿಕೊಡೆಗಳಂತೆ
ನಡೆದಿದೆ ನೋಡಿ
ಎಂ.ಜಿ. ರೋಡಿನಲಿ
ಸೂಳೆಯರ ಸಂತೆ
ಸ್ವಾಮೀ, ನಾನಿನ್ನು ಬರುತ್ತೇನೆ
ಸಾಕು, ಈ ಕಂತೆ.

–ಲೇಖಕರ ಗಾಂಧಿ ಜಯಂತಿ ಕವನ
ಸಂಕಲನ (1991)ದಿಂದ





**ಕವನ**

# ಹೊತ್ತು ಎಲ್ಲಿತ್ತು?

ಹೊತ್ತು ಎಲ್ಲಿತ್ತು?
ಗೊತ್ತಾಗದಂತೆ ಇತ್ತು
ಈ ಹೊತ್ತು 'ಆವತ್ತು'

ಅಂದು ಮಗುವಾಗಿದ್ದೆ
ಬೆಚ್ಚಗೆ ಮಲಗಿದ್ದೆ
ಆಗ ನಿದ್ದೆಯೇ ನಿದ್ದೆ
ಎಚ್ಚರಾಗಿ ಮೇಲೆದ್ದೆ
ಆಗಲೇ ಹೊತ್ತು ಹೋಗಿತ್ತು!

ಮುಂದೆ ದೊಡ್ಡವನಾದೆ
ಶಾಲೆ ಕಾಲೇಜಿಗೆ ಹೋದೆ
ಆಗ ಕಾಡಿತ್ತು ಈ ಹೊತ್ತು
ಆಟಕ್ಕೇ ಸಾಲದಾಗಿತ್ತು ಹೊತ್ತು
ಓದಲು ಎಲ್ಲಿತ್ತು ಪುರಸೊತ್ತು?

ಬೆಳೆದು ಯುವಕನಾದೆ
ಪರರ ಕೆಲಸಕ್ಕೆ ಹೋದೆ
ಆಗಲೂ ಕಾಡಿತ್ತು ಹೊತ್ತು
ಮಡದಿಗಾಗಿಯೂ ಇಲ್ಲವಾಗಿತ್ತು
ಈಗ ಪರರ ಕೆಲಸ ಮುಗಿದಿತ್ತು
ಪರಶಿವನ ಸಾಧಿಸಬೇಕಿತ್ತು
ಸಾಧನೆಯ ಮಾಡಬೇಕಿತ್ತು
ಆದರೆ ಎಲ್ಲಿತ್ತು ತಾಕತ್ತು?
ಕೈಕಾಲು ಸಡಿಲಾಗಿತ್ತು
ತಲೆಬುರುಡೆ ನಡುಗುತ್ತಿತ್ತು
ಕಣ್ಣು ಮಂಜಾಗಿತ್ತು
ನನ್ನ ಹೊತ್ತೇ ಮುಗಿದಿತ್ತು

ಬ್ರಿಗೇಡಿಯರ್ ಎಸ್.ಜಿ. ಭಾಗ್ವತ್, (ನಿ).
ಮೊ : 9241628195

